# ಭಾರತದ ಐವರು ಮಹನೀಯರು

ವಿ. ಸೀ.



ಪ್ರಕಾಶಕರು

**ಕೆ. ವಿ. ಗೋವಿಂದ ಶೆಟ್ಟಿ ಅಂಡ್ ಸನ್ಸ್**

ಕುಣಿಗಲು

೧೯೫೧

# ಮುನ್ನುಡಿ

ಮಹಾಭಾರತದ ಉಪಾಖ್ಯಾನಗಳಲ್ಲಿನ ಐದು ದಾಂಪತ್ಯದ ಕಥೆಗಳನ್ನು ಇಲ್ಲಿ ತೆರಳಿ ಮಾಡಿ ಅವಕ್ಕೆ ಸಂಬಂಧಿಸಿದಂತೆ ನಾಲ್ಕು ಮಾತನ್ನು ಹೇಳಲಾಗಿದೆ. ಇಂದಿನವರ ಮುಂದೆ ಹಲವು ಸಮಸ್ಯೆಗಳಿವೆ. ಅವನ್ನು ಪೂರ್ತಿ ಮಾಡುವಾಗ ಹಿಂದಿನ ಕಾಲದ ಆದರ್ಶವನ್ನೂ ಗಮನಕ್ಕೆ ತಂದುಕೊಳ್ಳುವುದು ಒಳ್ಳೆಯದು. ಆಯಾ ದೇಶದ ಚರಿತ್ರೆ ಅವರವರಿಗೆ ಹೆಚ್ಚು ಹತ್ತಿರದ್ದು ; ಅವರ ರಕ್ತದಲ್ಲಿ ಬೆರೆತದ್ದು ; ಅವರ ಮೂಳೆಯ ರಚನೆಗೆ ಕಾರಣವಾದ್ದು ; ಅವರನ್ನು ರೂಪುಗೊಳಿಸಿ ಅವರ ಪಕ್ಷಪಾತಗಳಿಗೆ ತಳಹದಿಯಾಗಿರುವದು. ಆದ್ದರಿಂದ ಈ ಕಥೆಗಳಲ್ಲಿನ ಸತ್ವವೂ ಬೆಳಕೂ ಇಂದಿಗೂ ಶಕ್ತಿಯನ್ನೂ ಬೆಳಕನ್ನೂ ಕೊಟ್ಟಾವೆಂದು ತಿಳಿದು ಈ ಕಾರ್ಯವನ್ನು ಕೈಕೊಂಡಿದೆ. ಹಳೆಯದರಲ್ಲಿ ಹೊಸದರ ದರ್ಶನವನ್ನು ಕಾಣಿಸುವ ಬಗೆ ಇದು ; ರುಚಿಸುವವರಿಗೆ ರುಚಿಸಬಹುದು. ಇಲ್ಲವಾದವರನ್ನು ಬೇರೆ ಬಗೆಯಲ್ಲಿ ಒಲಿಸಿಕೊಳ್ಳಬೇಕು.

ಐದನೆಯ ಕಥೆಯಲ್ಲಿ ಚ್ಯವನ, ಇಂದ್ರ, ಅಶ್ವಿನಿಯರ ಸಂಬಂಧದಲ್ಲಿ ಒಂದು ರಾಜಕೀಯ ಪ್ರಸಂಗ ಬೆಳೆಯುತ್ತದೆ. ಅದನ್ನು ಬೇರೆಯಾಗಿ ವಿಮರ್ಶಿಸಬೇಕು. ಆ ಭಾಗ ಕೇವಲ ಪ್ರೇಮಕಥೆಗೆ ಸೇರದ್ದು : ಅಧಿಕಾರವಿರುವವರು ಇಲ್ಲದವರಿಗೆ ತಮ್ಮ ಸಮಕ್ಕೆ ಬರಲಾಗಲಿ ,ಬೆಳೆಯಲಾಗಲಿ ಅವಕಾಶ ಕೊಡುವುದಿಲ್ಲ. ಅಡ್ಡಿ ತರುತ್ತಾರೆ. ಬೆದರಿಕೆಗಳನ್ನು ಹೊಡುತ್ತಾರೆ. ಚ್ಯವನರಂಥವರ ತಪೋಬಲ ಅಶ್ವಿನಿಯರಂಥ ಉಪಕಾರಶಕ್ತಿಗೆ ನೆರವಾದರೆ ಹೊಸ ಅಧಿಕಾರ ಸಂಪಾದನೆಯಾಗುತ್ತದೆ. ಇಂದ್ರನ ದರ್ಪವಾಗಲಿ ದಬ್ಬಾಳಿಕೆಯಾಗಲಿ ಆಗ ಎದುರು ನಿಲ್ಲಲು ಶಕ್ತವಾಗದು. ಯಜ್ಞಗಳಲ್ಲಿ ಆ ಮುಂಚೆ ಅಶ್ವಿನಿ ದೇವತೆಗಳಿಗೆ, ಇಂದ್ರನ ಪಂಕ್ತಿಯಲ್ಲಿ ಸೋಮಪಾನ ಮಾಡುವ ಅಧಿಕಾರವೂ ಮರ್ಯಾದೆಯೂ ಇರಲಿಲ್ಲವೇನೋ. ಚ್ಯವನರು ಉಂಟುಮಾಡಿಕೊಟ್ಟರು. ಇಂಥವರೇ ಹೊಸ ಮಾರ್ಗಗಳನ್ನು ರೂಢಿಸು

ವವರು ; ಹೊಸ ಸಂಪ್ರದಾಯ ಪದ್ಧತಿಗಳನ್ನು ಸ್ಥಾಪಿಸುವವರು. ಅಂಥ ಒಂದು ವಿಧಾನಚಿತ್ರವು ಇಲ್ಲಿ ಕಾಣುತ್ತದೆ.

ಮಹಾಭಾರತದ ಮಾತುಕಥೆಗಳನ್ನು ಇಲ್ಲಿ ಬಹುಮಟ್ಟಿಗೆ ಅನುಸರಿಸಿರುವುದರಿಂದ ಅಲ್ಲಿನ ಪುನರುಕ್ತಿ, ಆವರಣ, ಹೆಸರು, ರೀತಿ,ವರ್ಣನೆಗಳು ಕಾಣುವುದು ಸಹಜ. ಅವು ಕಾಂತಿಗುಂದದೆ ಕಂಡರೆ ಅದೇ ದೊಡ್ಡ ಪುಣ್ಯ. ಧರ್ಮದ ವಿಷಯದಲ್ಲಿ ಯಾವ ಅಪಚಾರಕ್ಕೂ ನನ್ನ ಮನಸ್ಸಿನಲ್ಲಿ ಎಡೆಯಿಲ್ಲವಾದ್ದರಿಂದ ಇಲ್ಲಿನ ಶ್ರದ್ಧೆಯನ್ನು ಕುರಿತು ಯಾರೂ ಸಂದೇಹಪಡಲಾರರೆಂದು ನಂಬಿದ್ದೇನೆ.

ಈ ನಾಡು, ಈ ಜನ ಅಂದಿನಂತೆಯೇ ಸತ್ಯ ಧರ್ಮಗಳ ಮೇಲೆ ನಿಲ್ಲಬೇಕು ; ಬೆಳೆಯಬೇಕು. ಅದಕ್ಕೆ ಸ್ವವಿಮರ್ಶೆ ಸಾಧನ.

ಮೊದಲ ಎರಡು ಕಥೆಗಳನ್ನು ಮೈಸೂರು ಸಂಸ್ಥಾನದ ವಯಸ್ಕರ ಶಿಕ್ಷಣ ಸಮಿತಿಯವರು ಏಳೆಂಟು ವರ್ಷಗಳ ಹಿಂದೆ ಅಚ್ಚುಮಾಡಿಸಿ ನನಗೆ ಪ್ರೋತ್ಸಾಹಕೊಟ್ಟರು. ಅವರಿಗೆ ಕೃತಜ್ಞನಾಗಿದ್ದೇನೆ. ಇಲ್ಲಿ ಅವನ್ನು ತಿದ್ದಿ ಬಹುವಾಗಿ ಮಾರ್ಪಡಿಸಿದೆ. ಅಲ್ಲಿನ ದೃಷ್ಟಿ, ರೀತಿ ಬೇರೆ; ಇಲ್ಲಿನವು ಬೇರೆ.

ಇದನ್ನು ತಯಾರಿಸುವುದರಲ್ಲಿ ಗೆಳೆಯರೊಬ್ಬರು ನಿರಂತರವಾಗಿ ಪ್ರಯಾಸಪಟ್ಟು ಉತ್ಸಾಹ ಕೊಟ್ಟರು. ಅವರ ಉಪಕಾರಕ್ಕೆ ಋಣಿಯಾಗಿ ಇದ್ದೇನೆ.

ಕುಣಿಗಲಿನ ಮಿತ್ರರು ಶ್ರೀ ಕೆ. ವಿ. ಗೋವಿಂದ ಶೆಟ್ಟರು ಇದರ ಪ್ರಕಟನೆಯ ಭಾರವನ್ನು ಹೊತ್ತು ನೆರವಾಗಿದ್ದಾರೆ; ಅವರಿಗೆ ವಂದನೆಗಳು.

ಬೆಂಗಳೂರು
೨೦-೯-೧೯೫೧

ವಿ. ಸೀ.

## ಒ ಳ ಪಿ ಡಿ

# ತಿದ್ದುಪಡಿ

| ಪುಟ | ಸಾಲು | ಓದಿ |
|---|---|---|
| ೬ | ೯ | "ನಿಷಧ |
| ೯ | ೧೫ | ದೂಳು |
| ೧೧ | ೧೨ | ಸುಹೃದರಾರಿಗೂ |
| ೧೪ | ೧೪ | ಸಮಾನರಾದ |
| ೩೫ | ೭ | ಶಕುಂತಲೆ ಪುರುಕುಲದ |
| ೪೧ | ೧೩ | ನಡೆಯಿತೊ |
| ೪೧ | ೧೬ | ಶ್ರೇಷ್ಠ |
| ೪೬ | ೨೧ | ಇಷ್ಟಲ್ಪ |
| ೫೧ | ೫ | ಹಿಡಿದು |
| ೫೫ | ೩ | ಅವರು ಹನ್ನೆರಡು |
| ೬೧ | ೧ | ಯುವವಳು |
| ೭೦ | ೨೧ | ಆ ದಾರಿಯಲ್ಲಿ |
| ೭೯ | ೧೫ | ಪುನಃ |
| ೭೦ | ೧೭ | ಸಾಧ್ವೀ |
| ,, | ೧೮ | ಸುವರ್ಚ |
| ,, | ೧೯ | ಭರದ್ವಾಜ |
| ೮೪ | ೧ | ಋಷಿಗಳೂ |
| ೮೯ | ೯ | ಲಾರದು ಅದು. |
| ೯೦ | ೧೭ | ಪರಶು |
| ೯೫ | ೧೭ | ಮುಖ್ಯ ಕಥೆ |
| ೧೦೫ | ೨೧ | ಅಸೂಯೆ |
| ೧೨೩ | ೨೧ | ದಳಾದರೂ |
| ೧೨೬ | ೨೬ | ಗಳನ್ನು |
| ೧೨೭ | ೧೨ | ಪಾತ್ರ |
| ,, | ೧೯ | ವರಣ |
| ೧೩೫ | ೧ | ಮೆಲುಕಬಹುದಾದೀತು |

# ನಳ ದಮಯಂತಿ

ನಮ್ಮ ದೇಶದ ಮಹಾಪುರುಷರ ಕಥೆಗಳಲ್ಲಿ ನಳ ದಮಯಂತಿಯರ ಕಥೆ ಒಂದು; ಅತಿ ಹಿಂದಿನ ಕಾಲದಿಂದಲೂ ಹೆಸರಾದುದು. ನಳನಂತಹ ಧರ್ಮಾತ್ಮರು ಅಪೂರ್ವ. ದಮಯಂತಿಯಂತಹ ಹೆಂಗಸೂ ಅಪೂರ್ವ. ಅವರಿಬ್ಬರ ಪ್ರೇಮದ ಕಥೆ ಲೋಕದ ಪ್ರೇಮಕಥೆಗಳಲ್ಲಿ ಮೇಲ್ಪಂಕ್ತಿಯ ಎಣಿಕೆಗೆ ಸೇರಿ ನಿಲ್ಲುವುದು. ಅದು ಮಹಾಭಾರತದ ವನಪರ್ವದಲ್ಲಿ ಒಳಕಥೆಯಾಗಿ ಬರುವುದು. ಧರ್ಮರಾಯನು ಕಾಡಿನಲ್ಲಿ ತುಂಬಾ ಕಷ್ಟ ದಲ್ಲಿರುವಾಗ, ಮನಸ್ಸು ಕುಗ್ಗಿರುವ ಒಂದು ಸಮಯದಲ್ಲಿ ಬೃಹದಶ್ವನೆಂಬ ಒಬ್ಬ ಋಷಿ ನಳದಮಯಂತಿಯರ ಕಥೆಯನ್ನು ಯುಧಿಷ್ಠಿರನಿಗೆ ಹೇಳು ತ್ತಾನೆ. ತನ್ನಂತೆಯೇ ಜೂಜಾಡಿ, ತನ್ನಂತೆಯೇ ಕಷ್ಟಕ್ಕೆ ಈಡಾದ ಆ ಮಹಾತ್ಮನ ಕಥೆಯನ್ನು ಹೇಳಿ, ಈತನಿಗೆ ಧೈರ್ಯಬರಲಿ, ಸ್ವಲ್ಪ ಸಮಾ ಧಾನವೂ ತಾಳ್ಮೆಯೂ ಉಂಟಾಗಲಿ ಎಂಬುದು ಋಷಿಯ ಉದ್ದೇಶ. ಪ್ರಪಂಚದಲ್ಲಿ ನಮಗೊಬ್ಬರಿಗೇ ಅಲ್ಲ ದುಃಖ, ಕಷ್ಟ; ನಮ್ಮಂತೆಯೇ ಇರುವ ವರೂ, ಇನ್ನೂ ಹೆಚ್ಚು ಕಷ್ಟಪಡುವವರೂ ಇದ್ದಾರೆ. ಅಂಥವರು ಎಷ್ಟೋ ಮಂದಿ ಆಗಿಹೋಗಿದ್ದಾರೆ. ನಮಗಿಂತಲೂ ಹೆಚ್ಚು ಕಷ್ಟಪಡುವವರು ಇನ್ನೂ ಹೆಚ್ಚು ಮಂದಿಯಿದ್ದಾರು ಎಂದು ನಾವು ಯೋಚಿಸುವೆವಾದರೆ ನಮ್ಮ ಕಷ್ಟವನ್ನು ತಾಳಿಕೊಳ್ಳುವುದು ಸುಲಭವಾಗುತ್ತದೆ. ನಮ್ಮ ಮನಸ್ಸು ಮೆತುವಾಗುತ್ತದೆ. ಅದರೊಳಗೆ ಬರಬಹುದಾದ ಬೇಗೆ, ಕ್ರೋಧ ಸ್ವಲ್ಪ ಮಟ್ಟಿಗಾದರೂ ಶಾಂತಪಾಗಲು ಅವಕಾಶವಾಗುತ್ತದೆ. ಅಂದು ಯುಧಿಷ್ಠಿರ ನಿಗೆ ಸ್ವಲ್ಪಮಟ್ಟಿಗೆ ಹಾಗಾಯಿತು. ಇಂದಿಗೂ ನಳದಮಯಂತಿಯರ ಕಥೆ ಯಿಂದ ಮನಸ್ಸಿಗೆ ಒಂದು ಕಷ್ಟಸಹನೆಯ ಧರ್ಮವು ಗೊತ್ತಾಗುತ್ತದೆ. ಋತುಪರ್ಣನು ನಳನಿಗೆ ಹೇಳಿಕೊಟ್ಟಂತೆ ಬೃಹದಶ್ವನು ಯುಧಿಷ್ಠಿರನಿಗೆ ಅಕ್ಷಹೃದಯವನ್ನು ಹೇಳಿಕೊಟ್ಟನಂತೆ. ಪುನಃ ಜೂಜಾಡಿದ್ದರೆ (!) ಯುಧಿಷ್ಠಿರನೂ ಶಕುನಿಯನ್ನು ಗೆಲ್ಲುತ್ತಿದ್ದನೇನೊ!

ಏನೇ ಆಪತ್ತು ಬರಲಿ, ನಮ್ಮ ನಮ್ಮ ನಡತೆಯಲ್ಲಿ ನಾವು ದೊಡ್ಡ ತನವನ್ನು ಬೆಳಸಬೇಕು. ಕಷ್ಟಸಮಯದಲ್ಲಿಯೇ ನಮ್ಮ ಯೋಗ್ಯತೆ ಪರೀಕ್ಷೆಗೆ ಬರುವುದು. ಎಂತಹ ಕೀಳುಸ್ಥಿತಿಯಲ್ಲಿಯೂ ಶುಚಿಯಾಗಿ ಬಾಳಲು ನಾವು ಬಯಸಬೇಕು ಎಂಬುದು ಇಂಥವರ ಚರಿತೆಯಿಂದ ಮನ ದಟ್ಟಾಗುವ ಸಂಗತಿ. ಇಂಥವರು ಲೋಕವನ್ನು ಬೆಳಗುವ ದೀವಿಗೆಗಳು. ಇಂತಹ ದೀವಿಗೆಗಳಿಂದ ಪ್ರತಿಯೊಬ್ಬರೂ ತಮ್ಮ ಎದೆಯಲ್ಲಿ ನಡತೆಯ ಬೆಳಕುಗಳನ್ನು ಹಚ್ಚಿಕೊಳ್ಳಬಹುದು.

೧

ಭರತಖಂಡದಲ್ಲಿ ಹಿಂದೆ ಅನೇಕ ರಾಜ್ಯಗಳಿರುತ್ತಿದ್ದವು. ಅಂತಹ ಒಂದು, ನಿಷಧರಾಜ್ಯ. ಅಲ್ಲಿನ ಅರಸು ವೀರಸೇನ. ಆತನಿಗೆ ನಳನೆಂಬ ಮಗನಿದ್ದನು. ಧರ್ಮ ಮತ್ತು ಅರ್ಥ ಸಂಬಂಧವಾದ ಎಲ್ಲ ಸಂಗತಿಗಳೂ ಆತನಿಗೆ ಚೆನ್ನಾಗಿ ತಿಳಿದಿದ್ದವು. ಯಾವ ಯಾವ ಗುಣಗಳನ್ನು ಲೋಕ ಇಷ್ಟಪಡುವುದೋ ಆ ಗುಣಗಳೆಲ್ಲಾ ಆತನಲ್ಲಿದ್ದವು. ಆತನು ರೂಪವಂತ; ಅಕ್ಷಪ್ರಿಯನು; ಸತ್ಯವಾದಿ; ಅನೇಕ ಅಕ್ಷೌಹಿಣಿಗಳ ಒಡೆಯನು; ಕುದುರೆಯನ್ನು ನಡಸುವ ವಿದ್ಯೆ ಆತನ ಕೈವಶವಾಗಿತ್ತು. ನಿಷಧ ರಾಜ್ಯದಲ್ಲಿ ಇವನು ಹೇಗೆ ಪ್ರಸಿದ್ಧನೋ ಹಾಗೆಯೇ ವಿದರ್ಭರಾಜ್ಯದಲ್ಲಿ ಭೀಮನೆಂಬ ರಾಜನು ಹೆಸರಾಗಿ ಆಳುತ್ತಿದ್ದನು. ಆತನು ಬಹು ಪರಾಕ್ರಮಶಾಲಿ. ಯುದ್ಧದಲ್ಲಿ ಭಯಂಕರನಾಗಿದ್ದನು. ಶೂರನಾದ ಆತನಲ್ಲಿ ಎಲ್ಲ ಒಳ್ಳೆಯ ಗುಣಗಳೂ ಇದ್ದವು. ಬಹುಕಾಲ ಆತನಿಗೆ ಮಕ್ಕಳಿರಲಿಲ್ಲ. ಮಕ್ಕಳಾಗಬೇಕೆಂಬ ಬಯಕೆ ಬಹಳವಾಗಿತ್ತು. ಒಂದು ಸಮಯದಲ್ಲಿ ಅವನ ಆಸ್ಥಾನಕ್ಕೆ ದಮನನೆಂಬ ಬ್ರಹ್ಮರ್ಷಿ ಬಂದನು. ಅರಸನೂ ರಾಣಿಯೂ ಆತನಿಗೆ ತಕ್ಕಂತೆ ಗೌರವವನ್ನೂ ಉಪಚಾರವನ್ನೂ ಮಾಡಿ ದರು. ಋಷಿಗೆ ಸಂತೋಷವಾಗಿ ಆ ದಂಪತಿಗಳಿಗೆ ಒಂದು ವರವನ್ನು ಕೊಟ್ಟನು. ವರದ ಫಲವಾಗಿ ದಮಯಂತಿ ಎಂಬ ಮಗಳು, ದಮ,

ದಾಂತ, ದಮನ ಎಂಬ ಒಳ್ಳೆಯ ವರ್ಚಸ್ಸಿನ ಮೂವರು ಗಂಡುಮಕ್ಕಳು ಹುಟ್ಟಿದರು. ದಮಯಂತಿಯಾದರೋ ಬೆಳೆಬೆಳೆಯುತ್ತ ಗುಣಕ್ಕೂ ರೂಪಕ್ಕೂ ಕೀರ್ತಿಪಡೆದಳು. ನರರಲ್ಲಿ ನಳನು ಶ್ರೇಷ್ಠ; ಆ ಕಾಲದ ಅರಸುಮಕ್ಕಳಲ್ಲಿ ಆತನ ರೂಪಕ್ಕೆ ಸಮನಿಲ್ಲವೆಂಬ ಕೀರ್ತಿ ಇತ್ತು. ಇತ್ತ ಚೆಲುವೆಯಾದ ದಮಯಂತಿ ಹಲವು ಬಾರಿ ನಳನ ರೂಪ, ಗುಣ, ಶೌರ್ಯ ಇವುಗಳ ಮಾತನ್ನು ಕೇಳಿದ್ದಳು. ಕೀರ್ತಿವಂತನಾದ ಆ ಕುಮಾರನಿಗೆ ಸಾಟಿಯಾದವರು ಈ ಲೋಕದಲ್ಲಿಯೇ ಯಾರೂ ಇಲ್ಲವೆಂದು ಆಕೆಯ ಬಳಿಯಲ್ಲಿದ್ದವರು ಆಗಾಗ ಹೇಳುತ್ತಿದ್ದರಾಗಿ ಆಕೆಯ ಮನಸ್ಸು ಆ ಕಡೆ ಅರಳಿತ್ತು. ಹಾಗೆಯೇ, ದಮಯಂತಿಗಿಂತ ರೂಪವಂತಳೂ ಗುಣವಂತಳೂ ಇನ್ನಿಲ್ಲ ವೆಂದು ಜನ ಆಡುತ್ತಿದ್ದ ಮಾತು ನಳನ ಕಿವಿಗೂ ಬಿದ್ದಿತ್ತು. ಇದರ ಫಲವಾಗಿ ಅವರಲ್ಲಿ ಒಬ್ಬರೊಬ್ಬರಿಗೆ ಪ್ರೇಮ ಹುಟ್ಟಿತು. ಒಬ್ಬರ ದರ್ಶನ ಇನ್ನೊಬ್ಬರಿಗಿಲ್ಲ. ಆದರೇನು? ಒಬ್ಬರು ಇನ್ನೊಬ್ಬರನ್ನು ಕುರಿತು ಹೃದಯದಲ್ಲಿ ಆಳವಾದ ಬಯಕೆ ಉಳ್ಳವರಾದರು.

ಕೆಲವು ಕಾಲ ಕಳೆಯಿತು. ಹೃದಯದ ಕಾಮವನ್ನು ತಡೆಯುವುದು ನಳನಿಗೆ ಅಶಕ್ಯವಾಯಿತು. ಅಂತಃಪುರದ ಬಳಿಯಲ್ಲಿನ ಒಂದು ವನದೊಳಕ್ಕೆ ಒಂಟಿಯಾಗಿ ಹೋಗಿ ತನ್ನ ಮನಸ್ಸಿನ ಆಸೆಯನ್ನು ತಾಳಿಕೊಳ್ಳಲು ಬಹುವಾಗಿ ಪ್ರಯತ್ನಿಸುತ್ತಿರುವಾಗ ಒಂದು ಸಂಗತಿ ನಡೆಯಿತು: ಕೆಂಪು ಕೊಕ್ಕಿನ, ಹೊಳೆಯುವ ಚಿನ್ನದ ಹೊದಿಕೆ ಉಳ್ಳಂತೆ ಕಾಣುವ ಕೆಲವು ಹಂಸಪಕ್ಷಿಗಳು ಆತನ ಕಣ್ಣಿಗೆ ಬಿದ್ದವು. ಸ್ವಲ್ಪ ದೂರ ಅಟ್ಟಿಕೊಂಡು ಹೋಗಿ ಅವನ್ನು ಹಿಡಿಯಬೇಕೆಂದು ಪ್ರಯತ್ನಪಟ್ಟು ಕಡೆಗೆ ನಳನು ಒಂದನ್ನು ಹಿಡಿದನು. ಗಗನದಲ್ಲಿ ಹಾರುತ್ತಿದ್ದು ಅವನ ಕೈಗೆ ಸಿಕ್ಕಿದ ಆ ಹಂಸ ಅವನನ್ನು ಕುರಿತು,–

"ನೀನು ನನ್ನನ್ನು ಕೊಲ್ಲಬೇಡ. ನಿನಗೆ ಪ್ರಿಯವಾದುದನ್ನು ಮಾಡುತ್ತೇನೆ. ಅರಸುಕುಮಾರ, ನೀನು ಯಾವ ರೀತಿಯ ಪಾಪವನ್ನೂ ಮಾಡುವವನಲ್ಲ. ಇಲ್ಲಿಂದ ದಮಯಂತಿಯ ಬಳಿಗೆ ಹಾರಿಹೋಗಿ ಆಕೆಗೆ ನಿನ್ನನ್ನು ವರ್ಣಿಸುತ್ತೇನೆ. ಆಕೆಗೆ ಒಪ್ಪುವ ವರನು ನೀನು ಎಂದು

ತಿಳಿಯಪಡಿಸಿ ಯಾವ ರೀತಿ ಆಕೆ ನಿನ್ನ ಹೆಂಡತಿಯಾಗುತ್ತಾಳೋ ಆ ರೀತಿ ಆಕೆಯ ಮನಸ್ಸು ಒಲಿಯುವಂತೆ ಮಾಡುತ್ತೇನೆ" ಎಂದಿತು. ಕೂಡಲೆ ನಳನು ಆ ಹಂಸವನ್ನು ಬಿಡುಗಡೆಮಾಡಿ ಹಾರಗೊಟ್ಟನು.

ಹಂಸಗಳು ಹಾರಿಹೋದವು. ದಮಯಂತಿ ಇದ್ದ ವಿದರ್ಭಕ್ಕೆ ಹೋಗಿ ಆಕಾಶದಿಂದ ಇಳಿದವು. ಅರಮನೆಯ ಅಂಗಳದಲ್ಲಿ ದಮಯಂತಿ ಸಖಿಯರೊಡನೆ ಆಡುತ್ತಿದ್ದಳು. ಸುತ್ತ ಅವರು; ನಡುವೆ ಆಕೆ; ದೂರದಿಂದ ಹಾಲುಬಣ್ಣದ ರೆಕ್ಕೆಗಳನ್ನು ಬಡಿಯುತ್ತ ಚೆಲುವಾಗಿ ಇಳಿದು ಬಂದ ಹಂಸಗಳು; — ಈ ಚಿತ್ರ ನೋಡುವುದಕ್ಕೆ ಬಹು ಚೆಂದ ಕಾಣುತ್ತಿತ್ತು. ದಮಯಂತಿಯ ಗೆಳತಿಯರು ಶುಭ್ರವಾದ ಮೈಯುಳ್ಳ ಅದ್ಭುತ ಕಾಂತಿಯ ಆ ಹಂಸಪಕ್ಷಿಗಳನ್ನು ಕಂಡರು. ಒಬ್ಬೊಬ್ಬ ಹುಡುಗಿ ಒಂದೊಂದನ್ನು ಅಟ್ಟಿಕೊಂಡು ಹೋದಳು. ಯಾವ ಹಂಸವನ್ನು ದಮಯಂತಿ ಅಟ್ಟಿ ಹೋದಳೋ ಅದು ಇದ್ದಕ್ಕಿದ್ದಂತೆ ಮನುಷ್ಯರಂತೆ ಮಾತಾಡಲು ಆರಂಭಿಸಿತು. ದಮಯಂತಿಗೆ ಆಶ್ಚರ್ಯ, ಕುತೂಹಲ ಉಂಟಾದವು. ಅದನ್ನು ಹಿಡಿಯಬೇಕೆಂಬುದಕ್ಕಿಂತ ಅದರ ಮಾತು ಕೇಳಬೇಕು ಎಂಬಾಸೆ. ಅದು ಆಡಿದ ಮಾತನ್ನು ಕೇಳಿದಷ್ಟೂ ಸಂತೋಷ, ಉತ್ಸಾಹ; ಪಕ್ಷಿಯನ್ನು ತನ್ನಲ್ಲಿಯೇ ಇಟ್ಟುಕೊಳ್ಳಬೇಕೆಂಬ ಇಷ್ಟ. ಹೀಗೆ ಆಕೆಯ ಮನಸ್ಸಿನಲ್ಲಿ ಬಗೆಬಗೆಯ ಭಾವಗಳು ಉಂಟಾದವು.

ಆ ಪಕ್ಷಿ, — "ದಮಯಂತಿ, ನಿಷಧ ರಾಜ್ಯದಲ್ಲಿ ನಳನೆಂಬ ರಾಜನಿದ್ದಾನೆ. ನೀನು ರೂಪವತಿ; ಆತನಿಗೆ ತಕ್ಕ ಹೆಣ್ಣು. ಆತನ ಭಾರ್ಯೆಯಾದರೆ ನೀನು ಹುಟ್ಟಿರುವುದು ನಿಷ್ಫಲವಾಗುವುದಿಲ್ಲ. ನಿನ್ನ ಚೆಲುವು ಸಫಲವಾಗುತ್ತದೆ" ಎಂದಾಗ ಆಕೆಗೆ ತನ್ನ ಹೃದಯದ ಒಳಗಿನ ಸಂತೋಷಗಳನ್ನು ಕೂಗಿ ಕರೆದು ಆಸೆ ತೋರಿಸುವಂತೆ ಆ ಮಾತು ಕೇಳಿಸಿದುವು. "ನಾರಿಯರಲ್ಲಿ ನೀನು ರತ್ನ. ಪುರುಷರಲ್ಲಿ ನಳನು ಉತ್ತಮನಾದ ವರ. ಇಂತಹ ವಿಶೇಷ ಗುಣವುಳ್ಳ ಎರಡು ಪದಾರ್ಥಗಳು ಕೂಡುವುದು ಲೋಕಕ್ಕೆ ಒಂದು ಅತಿಶಯ" ಎಂದು ಪಕ್ಷಿ ನುಡಿದಾಗ ಆಕೆಗೆ ಮೈ ಜುಮ್ಮೆನಿಸಿತು. ಕನಸಿನಲ್ಲಿದ್ದುದು ಎದುರಿಗೆ ರೂಪಗೊಂಡಂತೆ ಆಯಿತು. ಹಂಸವನ್ನು

ಕುರಿತು ದಮಯಂತಿ ಹೇಳಿದಳು: "ಹಂಸ, ಹೋಗಿ ಈ ಮಾತನ್ನು ನಳನಿಗೆ ಹೇಳಬಾರದೆ? ಅವನಿಗೂ ಹೇಳು."

ಪಕ್ಷಿ ಹಿಂದಕ್ಕೆ ನಿಷಧಕ್ಕೆ ಹಾರಿಹೋಗಿ ನಡೆದ ಸಂಗತಿಯನ್ನೆಲ್ಲ ನಳನಿಗೆ ಅರಿಕೆಮಾಡಿತು.

ದಮಯಂತಿಗೆ ಅಂದಿನಿಂದ ಹಿಡಿದು ನಳನನ್ನು ಕುರಿತುದೇ ಚಿಂತೆ ಆಯಿತು. ಆಕೆಯ ಮನಸ್ಸು ಸ್ವಸ್ಥತೆಯನ್ನು ಕಳೆದುಕೊಂಡಿತು. ನಳನನ್ನು ಕುರಿತೇ ಧ್ಯಾನ! ದೀನಳಾದಳು. ಅವಳ ಮೈಬಣ್ಣ ಕಂದಿತು. ದೇಹದಲ್ಲಿ ಬಡವಾದಳು. ಎದೆಯ ತುಂಬ ಅವನಿಗಾಗಿ ಪ್ರೇಮ. ಜಗತ್ತಿನಲ್ಲಿ ಶಯ್ಯೆ, ಆಸನ, ಭೋಜನಗಳಲ್ಲಿ ಪ್ರೀತಿಯಿಲ್ಲವಾಯಿತು. ಎಷ್ಟೇಕೆ, ಇನ್ನೊಂದೂ ಬೇಡವಾಯಿತು. ತಂದೆಯಾದ ಭೀಮ ಮಹಾರಾಜನಿಗೆ ದಮಯಂತಿಯ ಈ ಸ್ಥಿತಿ ಕೇಳಿ ತಿಳಿದುಬಂತು. ಆಕೆಯ ಸಖಿಯರು ಮಹಾರಾಜನಿಗೆ ಆಕೆಯ ಒಲವನ್ನು ಅರಿಕೆ ಮಾಡಿದ್ದರು. ಯೌವನಸ್ಥೆಳಾದ ಮಗಳ ಸ್ವಯಂವರವನ್ನು ಬೇಗನೆ ಏರ್ಪಡಿಸಬೇಕೆಂದು ಆತನಿಗೆ ತೋರಿತು. ಯೋಚನೆ ಬಂದುದೇ ತಡ, ದೇಶದ ಮೂಲೆ ಮೂಲೆಗೂ ದಮಯಂತೀ ಸ್ವಯಂವರದ ಸುದ್ದಿ ಮುಟ್ಟುವಂತೆ ವ್ಯವಸ್ಥೆಯೂ ಆಯಿತು. ನಾಡಿನ ರಾಜರಿಗೆಲ್ಲ ಔತಣದ ಕರೆ ಹೋಯಿತು.

ದಮಯಂತಿಯ ಸೌಂದರ್ಯ ಆ ಕಾಲದಲ್ಲಿ ಲೋಕಪ್ರಸಿದ್ಧವಾದ್ದು. ಹಲವು ಮಂದಿ ರಾಜರು, ಅರಸುಕುಮಾರರು ನಾನಾಕಡೆಗಳಿಂದ ವಿದರ್ಭಕ್ಕೆ ಬಂದರು. ಸ್ವಯಂವರ ಸಮಯಕ್ಕೆ ಕುಂಡಿನಪುರದಲ್ಲಿ ಸೇರಿದರು. ನಾರದರಿಂದ ಈ ಸುದ್ದಿಯನ್ನು ಕೇಳಿದ ಇಂದ್ರಾದಿ ನಾಲ್ವರು ದಿಕ್ಪಾಲಕರು ತಾವೂ ಬಂದರು. ದಮಯಂತಿಗಾಗಿ ಜೀವಹಿಡಿದಿದ್ದ ನಳನು ಸ್ವಯಂವರಕ್ಕೆ ಬರುತ್ತಿದ್ದನು. ವಿದರ್ಭದ ದಾರಿ. ಪ್ರಿಯೆಯ ಚಿಂತೆಯಲ್ಲಿ ನಳನು ಉತ್ಸಾಹದಿಂದ ಬರುತ್ತಿದ್ದಾನೆ. ಸೂರ್ಯನ ಹಾಗೆ, ಮನ್ಮಥನ ಹಾಗೆ ಹೊಳೆಯುತ್ತಿರುವ ಆತನನ್ನು ದೇವತೆಗಳು ದಾರಿಯಲ್ಲಿ ಕಂಡು ಆತನ ರೂಪಸಂಪತ್ತಿಯನ್ನು ನೋಡಿ ವಿಸ್ಮಿತರಾದರು. ತಮ್ಮ ಸಂಕಲ್ಪ ನೆರವೇರುವುದರಲ್ಲಿ ಅವರಿಗೆ ಸಂದೇಹವುಂಟಾಯಿತು. "ರಾಜಕುಮಾರ,

ನೀನು ಸತ್ಯವ್ರತನೆಂದು ನಾವು ಬಲ್ಲೆವು. ನಿನ್ನಿಂದ ನಮಗೆ ಒಂದು ಸಹಾಯ ಆಗಬೇಕಾಗಿದೆ. ನರೋತ್ತಮ, ನೀನು ನಮ್ಮ ದೂತನಾಗಬೇಕೆಂದು ಬೇಡುತ್ತೇವೆ" ಎಂದರು. ದೇವತೆಗಳ ಈ ಪ್ರಾರ್ಥನೆಗೆ ನಳನು ತಲೆಬಾಗಿದನು. ಕೈಗಳನ್ನು ಮುಗಿದು, 'ತಮ್ಮ ಕಾರ್ಯವನ್ನು ನಡಸಿಕೊಡುತ್ತೇನೆ' ಎಂದು ಭಕ್ತಿಯಿಂದ ಮಾತುಕೊಟ್ಟನು. "ತಾವು ಯಾರು ? ಯಾರ ಬಳಿಗೆ ನಾನು ದೂತನಾಗಿ ಹೋಗಬೇಕೆಂದು ತಮ್ಮ ಅಭಿಲಾಷೆ ? ಅಲ್ಲಿಗೆ ಹೋಗಿ ನಾನು ಮಾಡಬೇಕಾದ ಕಾರ್ಯ ಯಾವುದು ? ದಯಪಿಟ್ಟು ವಿವರವಾಗಿ ಹೇಳಬೇಕು" ಎಂದು ಕೇಳಿದನು. ದೇವತೆಗಳ ನಡುವೆ ಇದ್ದ ಇಂದ್ರನು ನಳನನ್ನು ಕುರಿತು "ನಿಷಧರಾಜ, ನಾವು ಅಮರರು. ದಮಯಂತಿಯನ್ನು ಬಯಸಿ ಬಂದಿದ್ದೇವೆ. ನಾವು ಬಂದಿದ್ದೇವೆಂದು ಆಕೆಗೆ ತಿಳಿವಳಿಕೆ ಕೊಡು. ಇಂದ್ರ, ಅಗ್ನಿ, ವರುಣ, ಯಮ ಈ ನಾಲ್ವರಾದ ನಾವು ಆಕೆಯನ್ನು ವರಿಸಲು ಇಷ್ಟವುಳ್ಳವರಾಗಿದ್ದೇವೆ. ನಮ್ಮಲ್ಲೊಬ್ಬರನ್ನು ಪತಿಯಾಗಿ ವರಿಸೆಂದು ದಯಮಾಡಿ ಆಕೆಗೆ ಹೇಳಬೇಕು" ಎಂದನು. ಹಾಗೆಯೇ ಆಗಲೆಂದು ಒಪ್ಪಿ, ಅರಮನೆಯ ಕಾವಲುಗಾರರ ಕಣ್ಣನ್ನು ತಪ್ಪಿಸಿ ಅರಸುಕುಮಾರಿಯಿರುವಲ್ಲಿಗೆ ಹೋಗುವಂತೆ ಶಕ್ತಿ ಪಡೆದು, ನಳನು ಹೊರಟು ದಮಯಂತಿಯಿದ್ದ ಅರಮನೆಯನ್ನು ಸೇರಿದನು.

ಈತನು ಅತಿಶಯವಾದ ತೇಜೋವಂತ. ಎಲ್ಲ ವೀರಲಕ್ಷಣಗಳೂ ರಾಜಲಕ್ಷಣಗಳೂ ತುಂಬಿದ್ದವು. ಮನೋಹರನಾಗಿದ್ದನು. ವೇಷ, ಭಾಷೆ ಎಲ್ಲದರಲ್ಲಿಯೂ ತಕ್ಕ ರೀತಿಯಲ್ಲಿ ನಿಂತನು. ಈತನನ್ನು ನೋಡಿದ ಕೂಡಲೆ ಸಖಿಯರೊಡನಿದ್ದ ದಮಯಂತಿಯ ಕಣ್ಣಿಗೆ ಸೌಭಾಗ್ಯವೊಂದನ್ನು ಕಂಡಂತಾಯಿತು. ಮೃದುವಾಗಿ ನಗುತ್ತ "ನಿಮ್ಮ ಆಕಾರ ನೋಡಿದರೆ ಒಬ್ಬ ದೇವತೆಯಂತೆ ಕಾಣುತ್ತಿರುವಿರಿ. ಶುಚಿಯ ಮೂರ್ತಿಯ ಹಾಗೆ, ಪಾಪಲೇಶವಿಲ್ಲದವರ ಹಾಗೆ ಕಾಣುತ್ತೀರಿ. ವೀರ, ನೀವಾರು ? ನೀವು ಯಾರೆಂಬುದನ್ನು ತಿಳಿಯಲು ನನಗೆ ಇಚ್ಛೆ ಉಂಟಾಗಿದೆ" ಎಂದಳು. ದಮಯಂತಿಯ ಪ್ರಶ್ನೆಗೆ ನಳನು ನೇರವಾಗಿ, ಗಂಭೀರವಾಗಿ ಉತ್ತರ ಕೊಟ್ಟನು: "ಮಂಗಳೆ, ನಾನು ನಳ. ದೇವರ ದೂತನಾಗಿ ನಿನ್ನಲ್ಲಿಗೆ

ಬಂದಿದ್ದೇನೆ. ಇಂದ್ರ, ಅಗ್ನಿ, ವರುಣ, ಯಮ ಈ ನಾಲ್ವರು ದೇವರು ನಿನ್ನಲ್ಲಿ ಮನಸ್ಸುಳ್ಳವರಾಗಿ ನಿನ್ನನ್ನು ಬಯಸಿ ಸ್ವಯಂವರಕ್ಕೆ ಬಂದಿದ್ದಾರೆ. ಅವರಲ್ಲಿ ಒಬ್ಬರನ್ನು ಪತಿಯನ್ನಾಗಿ ಆರಿಸಿಕೊ. ಅವರ ಸಹಾಯ ವಿಲ್ಲದಿದ್ದರೆ ಇತರರು ಕಾಣದಂತೆ ನಾನು ಇಲ್ಲಿಗೆ ಬಂದು ನಿನ್ನನ್ನು ಕಾಣುವುದು ಶಕ್ಯವಾಗುತ್ತಿರಲಿಲ್ಲ. ನಿನ್ನೆದುರಿಗೆ ನಾನು ಹೀಗೆ ನಿಂತಿರುವುದು ಅವರ ಪ್ರಭಾವ ಸಹಾಯಗಳಿಂದ" ಎಂದನು. ಈ ಮಾತನ್ನು ಕೇಳಿದ ಕೂಡಲೆ ದೇವತೆಗಳಿಗೆ ದಮಯಂತಿ ನಮಸ್ಕಾರ ಮಾಡಿದಳು. ನಗುತ್ತ ನಳನಿಗೆ ಹೇಳಿದಳು: "ನಳಮಹಾರಾಜ, ನಿಜವಾಗಿ ನಿಮಗೋಸ್ಕರ ಈ ಸ್ವಯಂವರ ಸಭೆ ನೆರಸಿರುವುದು. ನೀವು ಬಂದೀರೆಂದೇ ಇಷ್ಟು ಪ್ರಯತ್ನ ಇಲ್ಲಿ. ನೀವು ನನ್ನನ್ನು ಸ್ವೀಕರಿಸದೆ ಹೋದರೆ ನಾನು ವಿಷವೊ ಬೆಂಕಿಯೊ ನೀರೊ ಹಗ್ಗವೊ ಯಾವುದಾದರೂ ಒಂದರ ಪಾಲಾಗುತ್ತೇನೆ" ಎಂದಳು. ತಾನು ಯಾವಳನ್ನು ತನ್ನ ಹೃದಯದಲ್ಲಿ ಆರಾಧಿಸುತ್ತಿದ್ದನೋ ಆಕೆಯ ಬಾಯಿಂದ ಈ ಮಾತನ್ನು ಕೇಳಿ ನಳನಿಗೆ ಅತ್ಯಂತ ಸಂತೋಷ ವಾಯಿತು. ಆದರೆ ಮಾಡುವುದೇನು? ತಾನು ದಿಕ್ಪಾಲರಾದ ದೇವತೆಗಳಿಗೆ ಮಾತು ಕೊಟ್ಟಿದ್ದಾನೆ. ಅವರ ದೂತನಾಗಿ ಮಾತ್ರ ದಮಯಂತಿಯ ಹತ್ತಿರಕ್ಕೆ ಹೋಗಿ ನಿಂತಿದ್ದಾನೆ. ಆಗ ಅಲ್ಲಿ ತಾನು ಸ್ವತಂತ್ರನಲ್ಲ. ಆದುದರಿಂದ ದಮಯಂತಿಯನ್ನು ಕುರಿತು, "ದಮಯಂತಿ, ಲೋಕಪಾಲರು ನನಗಾಗಿ ಕಾದಿದ್ದಾರೆ. ಅವರು ಮಹಾತ್ಮರು. ಲೋಕದ ಒಡೆಯರು. ಅಂತಹವರನ್ನು ಬಿಟ್ಟು ಸಾಮಾನ್ಯ ಮನುಷ್ಯನಾದ ನನ್ನನ್ನು ಏಕೆ ಪತಿಯಾಗಿ ವರಿಸಬೇಕೆನ್ನುವೆ? ನಾನು ಅವರ ಪಾದದ ದೂಳಿಗೆ ಸಮನಲ್ಲ" ಎಂದನು. ಈ ಮಾತನ್ನು ದಮಯಂತಿ ಕೇಳಿದಳು. ಆಕೆಯ ಕಣ್ಣಲ್ಲಿ ನೀರು ತುಂಬಿತಾದರೂ ಮನಸ್ಸು ಸ್ವಲ್ಪವೂ ಚಲಿಸಲಿಲ್ಲ. "ದೇವತೆಗಳೆಲ್ಲ ನನ್ನ ನಮಸ್ಕಾರ ಪಡೆಯಲು ಯೋಗ್ಯರು. ರಾಜಕುಮಾರ, ನಿಮ್ಮನ್ನು ಮಾತ್ರ ನಾನು ಪತಿಯ ಹಾಗೆ ವರಿಸಬಲ್ಲವಳು. ಈಗ ನಾನು ನಿಮಗೆ ಸತ್ಯವನ್ನು ಹೇಳುತ್ತಿದ್ದೇನೆ. ನನ್ನ ಸ್ವಯಂವರ ಮಂಟಪಕ್ಕೆ ದೇವತೆಗಳೂ ಬರಲಿ, ನೀವೂ ಜೊತೆಯಲ್ಲಿ ದಯಮಾಡಿಸಿ. ಅವರ ಸನ್ನಿಧಿಯಲ್ಲಿಯೇ

ನಿಮ್ಮನ್ನು ವರಿಸುತ್ತೇನೆ. ಆಗ ನಿಮ್ಮ ದೋಷ ಯಾವುದೂ ಇರುವುದಿಲ್ಲ" ಎಂದಳು.

ಇದನ್ನು ಕೇಳಿ ಆಕೆಯ ಅಪ್ಪಣೆಯನ್ನು ಪಡೆದು ನಳಮಹಾರಾಜನು ದೇವತೆಗಳು ತನಗಾಗಿ ಕಾದಿದ್ದ ಸ್ಥಳಕ್ಕೆ ಹಿಂತಿರುಗಿದನು. "ದಮಯಂತಿಯನ್ನು ನೋಡಿದ್ದೆಯ? ಆಕೆಗೆ ನಮ್ಮ ಮಾತನ್ನು ತಿಳಿಸಿದೆಯ? ಪ್ರತಿಯಾಗಿ ಆಕೆ ಹೇಳಿದುದೇನು?" ಎಂದು ಆ ನಾಲ್ವರೂ ನಳನನ್ನು ಕೇಳಿದರು. "ನನ್ನ ಮಾತಿಗೆ ಬೇಸರಗೊಳ್ಳಬಾರದು. ನಾನು ತಮ್ಮನ್ನು ಆಕೆಗೆ ಬಹುವಾಗಿ ವರ್ಣಿಸಿದೆ. ಆದರೆ ಹೊಳೆವ ಮುಖವುಳ್ಳ ಆಕೆ ತಾನಾಗಲೇ ನಳನಾದ ನನ್ನನ್ನು ವರಿಸುವೆನೆಂಬ ಸಂಕಲ್ಪ ಮಾಡಿದ್ದೇನೆ ಎಂದಳು. ಸುರೋತ್ತಮರೆ, ಇದು ಸತ್ಯವಾದ ಮಾತು. ಆ ಬಾಲೆ ನನಗೆ ಹಾಗೆ ಹೇಳಿದಳು. ಪೂಜ್ಯರಾದ ದೇವತೆಗಳನ್ನು ಕರೆದುಕೊಂಡು ಸ್ವಯಂವರ ಸಭೆಗೆ ನಾನು ಬರಬೇಕೆಂದು ಹೇಳಿದಳು" ಎಂದನು.

## ೨

ಸ್ವಯಂವರದ ಶುಭಕಾಲ ಬಂದಿತು. ದಮಯಂತಿಯನ್ನು ಬಯಸಿ ಬಂದಿದ್ದ ರಾಜರು ಬಗೆಬಗೆಯ ಸಿಂಗಾರಗಳನ್ನು ಮಾಡಿಕೊಂಡು ತಮಗಾಗಿ ಏರ್ಪಡಿಸಿದ್ದ ಪೀಠಗಳಲ್ಲಿ ಕುಳಿತರು. ಶುಭಾನನೆಯಾದ ಆ ಅರಸುಕುಮಾರಿ ರಂಗವನ್ನು ಪ್ರವೇಶ ಮಾಡಿದಳು. ಅರಸರ ಕಣ್ಣುಗಳೂ ಮನಸ್ಸೂ ಆಕೆಯ ಪ್ರಭೆಯಿಂದ ಬೆಳಗಿದವು. ರಾಜರ ಹೆಸರು, ಕೀರ್ತಿ, ವಂಶಗಳನ್ನು ಸಭೆಯಲ್ಲಿ ವಿವರಿಸಿದರು. ನೋಡನೋಡುತ್ತ ದಮಯಂತಿಯ ಕಣ್ಣಿಗೆ ಒಂದೇ ಬಗೆಯ ಐದು ಗಂಡು ಆಕೃತಿಗಳು ಕಾಣಿಸಿದುವು. ಅವರಲ್ಲಿ ಯಾರೊಬ್ಬರನ್ನು ನೋಡಿದರೂ ನಳನಹಾಗೆ ಕಾಣಿಸುತ್ತಿತ್ತು. ಆಕೆಗೆ ದೊಡ್ಡ ಪೇಚಿಗಿಟ್ಟುಕೊಂಡಿತು. ಆ ಐವರಲ್ಲಿ ದೇವತೆಗಳಾರು, ನಳನಾರು ಎಂಬುದನ್ನು ಅರಿಯುವ ಬಗೆ ಹೇಗೆ? ಹಲವು ಬಗೆಯಾಗಿ ಚಿಂತಿಸಿ ಕಡೆಗೆ

ಆಕೆ ದೇವತೆಗಳಿಗೆ ನಮಸ್ಕಾರ ಮಾಡಿದಳು. ಭಕ್ತಿಯಿಂದ ಕೈಮುಗಿದು ನಡುಗುತ್ತ ಹೇಳಿದಳು :

"ಹಂಸಗಳ ಮಾತನ್ನು ಕೇಳಿ ನಾನು ನಿಷಧ ರಾಜನನ್ನು ಪತಿಯೆಂದು ವರಿಸಿದ್ದೇನೆ. ಇದೇ ಸತ್ಯ. ಮಾತಿನಲ್ಲಾಗಲಿ ಮನಸ್ಸಿನಲ್ಲಾಗಲಿ ನಾನು ಬೇರೆ ನಡೆಯುವವಳಲ್ಲ. ದೇವತೆಗಳು ನನಗೆ ಆತನನ್ನು ತೋರಿಸಿ ಪ್ರಸನ್ನ ರಾಗಬೇಕು. ಆತನನ್ನು ನಾನು ಗುರುತಿಸುವಂತೆ ತಾವು ತಮ್ಮ ಸಹಜ ರೂಪಗಳನ್ನು ತಾಳಿ ಸಹಾಯ ಮಾಡಬೇಕು" ಎಂದು ಬೇಡಿದಳು. ದೇವತೆಗಳು ಇನ್ನೇನೂ ಮಾಡಲಾಗಲಿಲ್ಲ. ಕರುಣೆ ಉಂಟುಮಾಡುವ ಆಕೆಯ ಮೊರೆಯನ್ನು ಕೇಳಿದಾಗ ಆಕೆಯ ಮನಸ್ಸು ಎಷ್ಟು ಶುದ್ಧವಾದು ದೆಂದು ಅವರಿಗೆ ತಿಳಿಯಿತು. ಆಕೆಯ ಬುದ್ಧಿ, ಭಕ್ತಿ, ನಳನ ಮೇಲಿನ ಪ್ರೀತಿ ಎಲ್ಲವೂ ಅವರಿಗೆ ಗೊತ್ತಾಯಿತು. ದಮಯಂತಿ ಬೇಡಿಕೊಂಡಂತೆ ತಮ್ಮ ತಮ್ಮ ಸಹಜ ರೂಪಗಳನ್ನು ತಾಳಿದರು- ಅವರ ಯಾರ ಮೈಯಲ್ಲಿಯೂ ಬೆವರಿಲ್ಲ; ಕಣ್ಣು ನಿಶ್ಚಲ; ಕೊರಳಮಾಲೆ ಹೊಚ್ಚ ಹೊಸತು; ಮೈಗೆ ದೂಳು ಸೋಂಕದು; ನೆಲವನ್ನು ಮುಟ್ಟದ ನಿಲವು – ಆ ಎಲ್ಲ ದೇವತೆಗಳದು. ನೆಳಲು ಬೀರುವ ಆಕಾರ, ಬಾಡಿರುವ ಹೂಮಾಲೆ, ಧೂಳು, ಬೆವರು ಕೂಡಿ ಕಾಣುವ ದೇಹ, ಕಣ್ಣು ರೆಪ್ಪೆ ಉಳ್ಳ ಭೂಮಿಷ್ಠನಾದ ನರನು ನಳನು. ಈ ಲಕ್ಷಣಗಳನ್ನು ನೋಡಿ ಆಕೆಗೆ ಸ್ಪಷ್ಟವಾಯಿತು — ದೇವತೆಗಳು ಯಾರು, ಪುಣ್ಯಶ್ಲೋಕನಾದ ನಳನು ಯಾರು ಎಂಬುದು. ತನ್ನ ಕೈಯಲ್ಲಿನ ಹೊಳೆ ಯುವ ವರಣಮಾಲೆಯನ್ನು ನೈಷಧನ ಕೊರಳಿಗೆ ಹಾಕಿದಳು. ನೆರೆದಿದ್ದ ರಾಜರೆಲ್ಲರ ಕೊರಲಿಂದಲೂ ಆಶ್ಚರ್ಯದ ಮಾತು ಹೊರಟಿತು. ದಮಯಂತಿ ನೈಷಧನನ್ನು ತನ್ನ ಪತಿಯಾಗಿ ವರಿಸಿದುದನ್ನು ನೋಡಿ ಮಹರ್ಷಿಗಳೂ ದೇವತೆಗಳೂ ಸಾಧು ಸಾಧು ಎಂದು ಕೊಂಡಾಡಿದರು. ಸಂತೋಷದಲ್ಲಿ ಲೋಕಪಾಲರೇ ನಳನಿಗೆ ಎಂಟು ವರಗಳನ್ನು ಕೊಟ್ಟು ಅಲ್ಲಿಂದ ಹೊರಟರು. ಉಳಿದ ರಾಜರೆಲ್ಲರೂ ತಂತಮ್ಮ ರಾಜ್ಯಗಳಿಗೆ ಮರಳಿದರು. ಮಗಳಿಗೆ ತಕ್ಕ ಗಂಡನು ದೊರೆತನೆಂದು ಭೀಮರಾಜನಿಗೆ ಪ್ರೀತಿ, ತೃಪ್ತಿ ಉಂಟಾದವು. ನಳನಿಗೂ ದಮಯಂತಿಗೂ ಬಹಳ ವೈಭವದಿಂದ ಮದುವೆ ನೆರವೇರಿತು.

ಇಷ್ಟ ಬಂದಷ್ಟು ಸಮಯ ವಿದರ್ಭದಲ್ಲಿಯೇ ಇದ್ದು ರಾಜನಿಂದ ಅನುಜ್ಞೆ ಪಡೆದು ನಳನು ತರುವಾಯ ಸ್ವಂತ ನಗರಕ್ಕೆ ಹೊರಟನು. ಧರ್ಮದಿಂದ ಪ್ರಜೆಗಳನ್ನು ಪಾಲಿಸುತ್ತ ದಮಯಂತಿಯೊಡನೆ ರಮಣೀಯವಾದ ವನ ಉಪವನಗಳಲ್ಲಿ ವಿಹರಿಸುತ್ತ ಸುಖವಾಗಿದ್ದನು. ಹೀಗೆ ಇರಲು ಆಕೆಯಲ್ಲಿ ಆತನಿಗೆ ಇಂದ್ರಸೇನೆಯೆಂಬ ಮಗಳೂ ಇಂದ್ರಸೇನನೆಂಬ ಮಗನೂ ಅವಳಿಮಕ್ಕಳಾದರು.

ದಮಯಂತಿ ನಳನನ್ನು ವರಿಸಿಯಾದ ಮೇಲೆ ಲೋಕಪಾಲಕರು ಸ್ವರ್ಗದ ತಮ್ಮ ಲೋಕಗಳಿಗೆ ಹೊರಡುತ್ತ ದಾರಿ ನಡೆಯುತ್ತಿರುವಾಗ ದ್ವಾಪರನು ಕಲಿಯೊಡನೆ ತಮ್ಮ ಕಡೆಗೆ ಬರುತ್ತಿರುವುದು ಕಾಣಿಸಿತು.

ಕಲಿಯನ್ನು ಕುರಿತು, ಇಂದ್ರನು 'ದ್ವಾಪರನೊಡನೆ ಎಲ್ಲಿಗೆ ಹೋಗುತ್ತಿರುವೆ, ಕಲಿ ?' ಎಂದು ಕೇಳಿದನು.

'ದಮಯಂತಿಯ ಸ್ವಯಂವರಕ್ಕೆ.'

'ಸ್ವಯಂವರ ಮುಗಿದುಹೋಯಿತು.'

'ಆಕೆ ಯಾರನ್ನು ವರಿಸಿದಳು ?'

'ನಳನನ್ನು.'

'ದೇವತೆಗಳಾದ ನೀವೆಲ್ಲ ಇದ್ದರೂ ?'

'ನಮ್ಮನ್ನೆಲ್ಲ ಬಿಟ್ಟು.'

ಕಲಿಗೆ ತಡೆಯಲಾಗದಷ್ಟು ಕೋಪ ಬಂದಿತಂತೆ. ದೇವತೆಗಳಿಗೆ ಅಪಮಾನ ಮಾಡಿದ ಅವಳಿಗೆ ವಿಪುಲವಾಗಿ ದಂಡನೆಯಾಗಬೇಕು ಎಂದು ಅವನಿಗೆ ಎನ್ನಿಸಿತು. ಈ ಬಗೆಯ ಕೋಪಕ್ಕೆ ಒಪ್ಪದೆ ಅವನ ದುರ್ಬುದ್ಧಿಯನ್ನು ಹಳಿದು ದಿಕ್ಪಾಲರು ಹೊರಟುಹೋದಮೇಲೆ – "ನಾನು ನಳನನ್ನು ಆವರಿಸಿಕೊಂಡು ರಾಜ್ಯದಿಂದ ಅವನನ್ನು ಓಡಿಸುತ್ತೇನೆ. ದಮಯಂತಿಯೊಡನೆ ಅವನಿಗೆ ಸುಖವಿಲ್ಲದಂತೆ ಮಾಡುತ್ತೇನೆ. ಪಗಡೆಯ ದಾಳವನ್ನು ನೀನು ಹೊಕ್ಕು ನನಗೆ ಸಹಾಯಮಾಡು, ಸಾಕು" ಎಂದು ಒಡನಿದ್ದ ದ್ವಾಪರನಿಗೆ ಹೇಳಿದನು. ಇಬ್ಬರೂ ಅದಕ್ಕಾಗಿ ಹೊರಟರು. ವಿಚಿತ್ರ ಸಂಗಾತಿಗಳು; ವಿಚಿತ್ರ ಒಪ್ಪಂದ !

ಇವರು ನಳನ ಬಳಿಯಲ್ಲಿ ಹನ್ನೆರಡು ವರ್ಷ ನಿಂತು ಕಾಯಲು ಕಲಿಗೆ ಒಂದು ಅವಕಾಶ ಸಿಕ್ಕಿತು. ಪುಷ್ಕರನೆಂಬವನು ನಳನ ತಮ್ಮ. ಅವನ ಬಳಿ ಕಲಿ, ದ್ವಾಪರ ಇಬ್ಬರೂ ಹೋದರು. 'ಬಾ ಪುಷ್ಕರ, ನಳನೊಡನೆ ಒಂದಾಟ ಪಗಡೆ ಆಡು. ನಮ್ಮ ಸಹಾಯದಿಂದ ನೀನು ಗೆಲ್ಲುವೆ. ದ್ಯೂತದಲ್ಲಿ ನಳನನ್ನು ಗೆದ್ದರೆ ನಿಷಧರಾಜ್ಯ ನಿನ್ನದಾಗುವುದು' ಎಂದು ಪ್ರೋತ್ಸಾಹ ಕೊಟ್ಟರು. ಕಾಳಗದಲ್ಲಿ ಹಗೆಯನ್ನು ಕೊಲ್ಲುವ ಬಲಿಷ್ಠನಾದ ಆ ತಮ್ಮ ಪುಷ್ಕರನು ಅಣ್ಣನ ಬಳಿಗೆ ಹೋಗಿ ಅವನನ್ನು ದ್ಯೂತಕ್ಕೆ ಕರೆದನು. ಆಟಕ್ಕೆ ಮೇಲೆ ಮೇಲೆ ಒತ್ತಿದನು. ಮಹಾಮನಸನಾದ ನಳನು ಆ ಕರೆಯನ್ನು ಕಡೆಗಣಿಸುವುದಕ್ಕಾಗದೆ ದ್ಯೂತಕ್ಕೆ ಒಪ್ಪಿದನು ದ್ಯೂತಕ್ಕೂ ಯುದ್ಧಕ್ಕೂ ಕ್ಷತ್ರಿಯನನ್ನು ಕರೆದರೆ ಅವನು ಅದನ್ನು ಮಾನ್ಯ ಮಾಡಬೇಕಂತೆ; ಇಲ್ಲವಾದರೆ ಕ್ಷತ್ರಿಯನಿಗೆ ಅಪಮಾನವಂತೆ. ಆದ್ದರಿಂದ ಒಪ್ಪಿದನು. ರಾಜನ ಸುಹೃದಯರಾರಿಗೂ ಆತನ ಮನಸ್ಸನ್ನು ತಿರುಗಿಸಲಾಗಲಿಲ್ಲ. ಆಟಕ್ಕೆ ಇಳಿದುದೇ ತಡ ಆಟ ಮದವಾಯಿತು. ಅಡಗಿಸಲಾಗದ್ದಾಯಿತು.

ಇಟ್ಟ ವಸ್ತು, ವಾಹನ, ಸುವರ್ಣ, ಹಿರಣ್ಯ, ವಸನ ಎಲ್ಲವೂ ಪುಷ್ಕರನಿಗಾದವು. ಪೌರರೂ ಮಂತ್ರಿಗಳೂ ಬಂದು ರಾಜನ ಮನಸ್ಸನ್ನು ತಿರುಗಿಸಲು ಆತುರರಾಗಿ ಅರಮನೆಯ ಬಾಗಿಲಲ್ಲಿ ನಿಂತರು. ರಾಜಭಕ್ತಿ ಪುರಸ್ಸರವಾಗಿ ಅವರೆಲ್ಲರೂ ಬಾಗಿಲಲ್ಲಿ ತಮ್ಮನ್ನು ಕಾಣಬೇಕೆಂದು ಕಾದಿದ್ದಾರೆ ಎಂದು ದಮಯಂತಿ ಗಂಡನಿಗೆ ತಿಳಿಸಿದಳು. ಅಳುತ್ತಾ ಹೆಂಡತಿ ಹೇಳಿದ ಈ ಮಾತು ಕೂಡ ಕಲಿಯ ಆವೇಶ ಬಲವಾಗಿದ್ದದ್ದರಿಂದ ರಾಜನ ಕಿವಿಗೆ ಬೀಳಲಿಲ್ಲ. ಆತನು ಒಂದು ಮಾತನ್ನೂ ಉತ್ತರವಾಗಿ ಆಡಲಿಲ್ಲ. ದುಃಖಾರ್ತರಾಗಿ, ಲಜ್ಜಿತರಾಗಿ ಅವರೆಲ್ಲ ಹಿಂದಕ್ಕೆ ಮನೆಗಳಿಗೆ ಹೊರಟು ಹೋದರು.

ನಳನ ಸಾರಥಿಯ ಹೆಸರು ವಾರ್ಷ್ಣೇಯ. ಇದನ್ನೆಲ್ಲ ನೋಡುತ್ತಿದ್ದ ಆತನಿಗೆ ಅತಿಶಯವಾದ ಶೋಕವುಂಟಾಯಿತು. ದಮಯಂತಿ ಅವನನ್ನು ಬಳಿಗೆ ಕರೆದು ಅವನಿಗೆ ತನ್ನ ಕಳವಳವನ್ನು ತಿಳಿಸಿದಳು. ಆಕೆ ದೇಶ ಕಾಲ

ಅರಿತವಳು. ಯಾವುದನ್ನು ಎಲ್ಲಿ ಯಾವಾಗ ಮಾಡಬೇಕೆಂಬುದು ಆಕೆಗೆ ಗೊತ್ತು. ಸರಿಯಾದ ಸಮಯಕ್ಕೆ ಆಕೆ ಆಪ್ತಕಾರಿಯಾದ ಅವನಿಗೆ ಹೇಳಬೇಕಾದುದನ್ನು ಹೇಳಿ,

"ವಾರ್ಷ್ಣೇಯ, ರಾಜನಲ್ಲಿದ್ದುದೆಲ್ಲ ಹೋಯಿತು; ನಮ್ಮ ಯಾರ ಮಾತೂ ರಾಜನಿಗೆ ಕೇಳಿಸದು, ರುಚಿಸದು. ಈಗ ನೀನೇ ನಮಗೆ ಸಹಾಯ ಮಾಡಬೇಕು. ನನ್ನ ಮಾತಿನಂತೆ ಮಾಡು. ವಾಯುವೇಗವುಳ್ಳ ನಳನ ಪ್ರೀತಿಯ ಕುದುರೆಗಳನ್ನು ರಥಕ್ಕೆ ಕಟ್ಟು; ಆತನ ಈ ಅವಳಿಮಕ್ಕಳನ್ನು ಕೂಡಿಸಿಕೊಂಡು ನಮ್ಮ ತಂದೆಯಿರುವ ಕುಂಡಿನಪುರಕ್ಕೆ ಕರೆದುಕೊಂಡು ಹೋಗಿ ಬಿಡು" ಎಂದು ಕೇಳಿಕೊಂಡಳು. ಸಾರಥಿ ನಳನ ಅಮಾತ್ಯನಿಗೆ ಈ ಸಂಗತಿಯನ್ನು ತಿಳಿಸಿ ವಿದರ್ಭದೇಶಕ್ಕೆ ಪ್ರಯಾಣ ಮಾಡಿದನು. ಮಕ್ಕಳನ್ನು ತಾತನ ವಶಕ್ಕೆ ಕೊಟ್ಟನು. ರಥ, ಕುದುರೆಗಳನ್ನು ಅಲ್ಲಿಯೇ ಬಿಟ್ಟನು. ಭೀಮರಾಜನಿಗೆ ನಡೆದ ಎಲ್ಲ ಸಂಗತಿಗಳನ್ನೂ ತಿಳಿಸಿ ಇಂದ್ರಸೇನೆ ಇಂದ್ರಸೇನರ ಅಪ್ಪಣೆ ಪಡೆದನು. ಎದೆಯಲ್ಲಿ ನಳನಿಗಾಗಿ ವ್ಯಸನ. ದುಃಖದಿಂದ ತಾನು ಋತುಪರ್ಣರಾಜ್ಯಕ್ಕೆ ಹೋಗಿ ಅಲ್ಲಿ ಸೇವೆಯನ್ನು ಒಪ್ಪಿಕೊಂಡು ನಿಂತನು.

ಇತ್ತ ದ್ಯೂತ ನಡೆದೇ ನಡೆಯಿತು. ರಾಜನು ಎಲ್ಲವನ್ನೂ ಪಣವಾಗಿಟ್ಟ; ಸೋತ. ಜೂಜಾಟದಲ್ಲಿ ಮನಸ್ಸು ಹೀಗೆ ಸೋಲುತ್ತದೆ. ಮನುಷ್ಯ ನಾಶವಾಗುತ್ತಾನೆ. ಹೆಂಡದಂತೆ ಅದು. ಕುಡಿದಷ್ಟೂ ಮನಸ್ಸನ್ನು ದುರ್ಬಲ ಮಾಡುತ್ತದೆ. ಆಡಿದಷ್ಟೂ ಮನಸ್ಸು ಸೋಲುತ್ತದೆ. ಮಾನ, ಅವಮಾನ, ಸರಿ, ತಪ್ಪು ಕಲಸಿಕೊಳ್ಳುತ್ತವೆ. ಯಾವುದನ್ನೂ ಉಳಿಸಿಕೊಳ್ಳುವುದು ಕಷ್ಟವಾಗುತ್ತದೆ. 'ನೀನು ಇಟ್ಟದ್ದು ಎಲ್ಲ ಹೋಯಿತು. ಇನ್ನು ನಿನಗೆ ಉಳಿದಿರುವುದು ದಮಯಂತಿಯೊಬ್ಬಳು. ಉಳಿದುವೆಲ್ಲ ನನ್ನವಾಗಿವೆ; ಅವಳನ್ನು ಪಣವಾಗಿಡುವೆಯಾದರೆ ನೋಡು' ಎಂದು ಪುಷ್ಕರನು ಕೇಳಲು ನಳನಿಗೆ ಹೃದಯ ಸೀಳಿದಂತಾಯಿತು. ಎದ್ದು ಕೋಪದಿಂದ ಪುಷ್ಕರನನ್ನು ನೋಡಿ, ತನ್ನ ಮೈಮೇಲಿದ್ದ ಎಲ್ಲ ಭೂಷಣಗಳನ್ನೂ ಕಳಚಿ ಕೊಟ್ಟನು. ಆ ಎಲ್ಲ ಪುಷ್ಕರನವು; ಉಟ್ಟ ಒಂದು ಬಟ್ಟೆ ಮಾತ್ರ ಈಗ ಅವನದಾಗಿ

ಉಳಿದಿತ್ತು. ಮೈಮುಚ್ಚಲು ಮೇಲಂಗಿಯಿಲ್ಲ. ವಿಪುಲವಾದ ಐಶ್ವರ್ಯವನ್ನು ಹಿಂದೆ ಬಿಟ್ಟು ನಳನು ಅರಮನೆಯಿಂದ ಹೊರಕ್ಕೆ ಹೊರಟನು.

೩

ಉಟ್ಟ ಬಟ್ಟೆಯಲ್ಲಿ ದಮಯಂತಿಯೂ ಆತನ ಹಿಂದೆ ನಡೆದಳು. ಇನ್ನು ಆ ರಾಜ್ಯದಲ್ಲಿ ನಳನಿಗೆ ಸ್ಥಳವಿಲ್ಲ. ತಮ್ಮನ ದ್ವೇಷ, ಆಜ್ಞೆ ಹಾಗೆ; ಪುಷ್ಕರನ ಭಯದಿಂದ ಆತನಿಗೆ ಯಾರೂ ಕರುಣೆ ತೋರಿಸದಾದರು. ನೆಲೆ ಕೊಡದಾದರು. ಮೂರು ದಿನ ಅನ್ನವಿಲ್ಲದೆ ತನ್ನ ಊರಿನಲ್ಲಿಯೇ ಉಪವಾಸ ಮಾಡಿದುದಾಯಿತು. ಗಂಡ ಹೆಂಡತಿ ನೀರು ಕುಡಿದು ಕಾಲ ಹಾಕಿದರು. ನಾಲ್ಕನೆಯ ದಿನ ಕಾಡನ್ನು ಹೊಕ್ಕರು. ಒಳಗೆ ಹಸಿವು ಪೀಡಿಸುತ್ತಿರಲು ಅಂದಿನ ಹಗಲು ದೀರ್ಘವಾಗಿ ಕಾಡಿತು ಆಗ ಆಕಾಶದಲ್ಲಿ ಹಾರಿಹೋಗುತ್ತಿದ್ದ ಕೆಲವು ಸಣ್ಣ ಹಕ್ಕಿಗಳು ಆತನ ಕಣ್ಣಿಗೆ ಬಿದ್ದುವು. ಹಕ್ಕಿಗಳ ರೆಕ್ಕೆ ಬಂಗಾರದವುಗಳಂತೆ ಹೊಳೆದವು. ನಳನಿಗೆ ಒಳಗೆ ಹಸಿವು ಬೇಯಿಸುತ್ತಿತ್ತಲ್ಲವೆ? ತಿಂದರೆ ಅನ್ನವಾಯಿತು, ಮಾರಿದರೆ ಧನವಾಯಿತು – ಇವುಗಳನ್ನು ಹಿಡಿಯೋಣವೆಂದು ಸೊಂಟದ ಸುತ್ತ ಉಟ್ಟ ಬಟ್ಟೆಯನ್ನು ಬಿಚ್ಚಿ ಬೀಸಿ ಅವುಗಳ ಮೇಲೆ ಒಗೆದನು. ಹಕ್ಕಿಗಳು ಅದನ್ನು ಎತ್ತಿಕೊಂಡು ಬಾನಿಗೆ ಹಾರಿದವು. ದೀನನಾಗಿ ಮುಖ ತಗ್ಗಿಸಿ, ದಿಗಂಬರನಾಗಿ ನೆಲದ ಮೇಲೆ ನಿಂತಿದ್ದ ಅವನನ್ನು ಕುರಿತು,—

"ಏನು ಬುದ್ಧಿಯಿಲ್ಲ ನಿನಗೆ? ನಾವು ದಾಳಗಳು; ನೀನುಟ್ಟ ಬಟ್ಟೆಯನ್ನೂ ಸೆಳೆದುಕೊಳ್ಳಲೆಂದೇ ಹಾರಿಬಂದೆವು. ನಿನ್ನ ಮೈಮೇಲೆ ಒಂದು ಬಟ್ಟೆ ಇದ್ದರೂ ನಮಗೆ ಪ್ರೀತಿಯಿಲ್ಲ" ಎಂದು ನುಡಿದವು.

ಹೆಂಡತಿ ದಮಯಂತಿ ಇದೆಲ್ಲವನ್ನೂ ನೋಡುತ್ತಿದ್ದಳು. ನೋಡಿ ನುಡಿಯದೆ ನಡೆದಿದ್ದಳು. ಆಕೆಯನ್ನು ನೋಡಿ ನಳನು — "ಕೆಲಸ ಕೆಟ್ಟಿತು, **ದಮಯಂತಿ**; ನನ್ನ ಸ್ಥಿತಿ ಅತಿಯಾಗಿ ವಿಷಮಿಸಿದೆ. ದುಃಖದಿಂದ ಚೈತನ್ಯ ಹೋಗಿದೆ. ನಾನು ನಿನ್ನ ಗಂಡ. ನಿನಗೆ ಹಿತದ ಮಾತು ಹೇಳುತ್ತೇನೆ,

ಕೇಳು. ದಕ್ಷಿಣಾಪಥಕ್ಕೆ ಇಲ್ಲಿಂದ ಹಲವು ದಾರಿಗಳು ಹೋಗುವುವು. ಅದೇ ವಿಂಧ್ಯಪರ್ವತ; ಅದೇ ಸಮುದ್ರಕ್ಕೆ ಹೋಗಲಿರುವ ಪಯೋಷ್ಣೀ ನದಿ. ಮಹರ್ಷಿಗಳ ಆ ಆಶ್ರಮಗಳಲ್ಲಿ ಹಣ್ಣು, ಹೂ ಬೇಕಾದಷ್ಟಿವೆ; ವಿದರ್ಭದೇಶಕ್ಕೆ ಇದು ದಾರಿ; ಈ ದಾರಿ ಕೋಸಲಕ್ಕೆ ಹೋಗುತ್ತದೆ" ಎಂದು ತೋರಿಸಿದನು. ದಮಯಂತಿಯ ಕಣ್ಣೀರು ತಡೆಯಲಾಗದಾಯಿತು. ಕರುಣೆ ಉಕ್ಕಿತು; ಧ್ವನಿ ನಡುಗಿತು. ಆಕೆ ಹೇಳಿದಳು — "ನನ್ನರಸ, ನಿಮ್ಮ ಸಂಕಲ್ಪವನ್ನು ಪುನಃ ಪುನಃ ಚಿಂತಿಸಿ ನನ್ನ ಹೃದಯ ಕಂಪಿಸುತ್ತದೆ. ಮೈಯ ಅಂಗ ಕುಸಿಯುತ್ತಿದೆ. ಇಂದು ನಿಮಗೆ ರಾಜ್ಯವಿಲ್ಲ, ದ್ರವ್ಯವಿಲ್ಲ; ಬಟ್ಟೆಯಿಲ್ಲ; ಹಸಿವಿನ ಶ್ರಮ ಬಾಧಿಸುತ್ತಿದೆ. ಜನವಿಲ್ಲದ ಈ ವನದಲ್ಲಿ ನಿಮ್ಮೊಬ್ಬರನ್ನು ಬಿಟ್ಟು ನಾನು ಹೇಗೆ ಹೋದೇನು? ಮಹಾರಾಜ, ಶ್ರಮದಿಂದಲೂ ಹಸಿವಿಂದಲೂ ಕೂಡಿದ ನಿಮ್ಮ ಬಳಿಯಲ್ಲಿ ಹಿಂದಿನ ಸುಖಗಳನ್ನೆಲ್ಲ ನೆನೆದು ನಿಲ್ಲುತ್ತೇನೆ. ಘೋರವಾದ ಈ ವನದಲ್ಲಿ ನಿಮಗೆ ಸುಖವನ್ನು ಕೊಡುತ್ತಿರುತ್ತೇನೆ. ಬಳಲಿಕೆಯನ್ನು ನಿವಾರಿಸುತ್ತೇನೆ. ಆರ್ತನಾದ ಗಂಡಸಿಗೆ, ಹೆಂಡತಿಗೆ ಸಮಾನನಾದ ವೈದ್ಯರು ಬೇರೊಬ್ಬರಿಲ್ಲ. ಎಲ್ಲ ದುಃಖಸಮಯಗಳಲ್ಲಿಯೂ ಈ ಮಾತು ಸತ್ಯ. ಏತಕ್ಕೆ ನೀವು ಮರಳಿ ಮರಳಿ ಇದು ವಿದರ್ಭಕ್ಕೆ ದಾರಿ, ಇದು ಕೋಸಲಕ್ಕೆ ದಾರಿ ಎಂದು ನನಗೆ ಹೇಳುತ್ತಿದ್ದೀರಿ? ನಿಮ್ಮ ಮನಸ್ಸೊಲಿದರೆ ಇಬ್ಬರೂ ಜೊತೆಯಲ್ಲಿ ವಿದರ್ಭಕ್ಕೆ ಹೋಗೋಣ, ನಡೆಯಿರಿ. ಅಲ್ಲಿ ನಿಮಗೆ ತಕ್ಕ ಗೌರವಗಳನ್ನು ವಿದರ್ಭರಾಜನು ಸಲ್ಲಿಸುತ್ತಾನೆ."

ನಳನು ಉತ್ತರವಾಗಿ ಏನು ಹೇಳಿಯಾನು? "ದಮಯಂತಿ, ದಮಯಂತಿ, ನಾನು ಅಲ್ಲಿಗೆ ಹಿಂದೆ ಹೋದಾಗ ಸಮೃದ್ಧನಾಗಿ ಹೋದೆ; ನಿನಗೆ ಸಂತೋಷ ವೃದ್ಧಿಯಾಗುವ ರೀತಿ ಹೋದೆ. ನಿನಗೆ ಶೋಕವನ್ನು ಹೆಚ್ಚಿಸುತ್ತ ಈಗ ಅಲ್ಲಿಗೆ ಹೇಗೆ ಹೋದೇನು?"

ಗಂಡಹೆಂಡಿರು ಇಬ್ಬರಿಗೆ ಈಗ ಇರುವುದು ಒಂದೇ ಬಟ್ಟೆ. ಅಲ್ಲಿ ಇಲ್ಲಿ ಅಲೆದರು. ಹಸಿವು ನೀರಡಿಕೆಗಳಿಂದ ಬಳಲಿ, ಆಯಾಸಪಟ್ಟು, ಕಡೆಗೆ ಒಂದು ವಿಶ್ರಾಂತಿಸ್ಥಳಕ್ಕೆ ಸೇರಿದರು. ಹಗಲೆಲ್ಲ ನಡೆದು ಹಸಿದು

ಆಯಾಸಗೊಂಡಿದ್ದರಿಂದ ಇಬ್ಬರಿಗೂ ನಿದ್ರೆ ಬಂತು. ಮಲಗಿ ನಿದ್ರೆ ಹೋದರು.

ಮನಸ್ಸಿನಲ್ಲಿ ಶೋಕವಿದ್ದ ಕಾರಣದಿಂದ ನಳನಿಗೆ ಬೇಗ ಎಚ್ಚರ ವಾಯಿತು. ತಾನು ಮಾಡಿದುದನ್ನು ನೆನೆದೂ ತನ್ನ ಸ್ಥಿತಿಯನ್ನು ಕುರಿತೂ ಬಗೆಬಗೆಯಾಗಿ ಚಿಂತಿಸಿದನು. ಏನು ಮಾಡಲಿ, ಏನು ಬಿಡಲಿ, ಸಾಯಲೆ, ಇವಳನ್ನು ಬಿಟ್ಟು ಹೋಗಲೆ, ಹೇಗೆ ಮಾಡಿದರೆ ಸರಿಯಾದೀತು ಎಂದು ಬಹುವಾಗಿ ಯೋಚಿಸಿದನು. ನನ್ನ ಮೇಲಿನ ಪ್ರೀತಿಯಿಂದ ನನ್ನ ಜೊತೆ ಯಲ್ಲೇ ಇದ್ದುಕೊಂಡು ಈ ಹೆಂಡತಿ ತುಂಬಾ ದುಃಖಪಡುತ್ತಾಳೆ; ಸಾನಿಲ್ಲದಿದ್ದರೆ ಸ್ವಜನವಿರುವ ಕಡೆಗಾದರೂ ಹೋದಾಳೇನೊ; ನಿಃಸಂಶಯ ವಾಗಿ ನನ್ನಿಂದ ಇವಳಿಗೆ ದುಃಖ ಪ್ರಾಪ್ತವಾಯಿತು; ಇವಳನ್ನು ಬಿಟ್ಟು ಹೋದರೆಯೇ ಇವಳಿಗೆ ಸ್ವಲ್ಪವಾದರೂ ಸುಖವುಂಟಾದೀತು ಎಂದು ಬಹು ವಾಗಿ ಪುನಃ ಪುನಃ ವಿಚಾರಮಾಡಿದನು. ಕೆಲವು ಕ್ಷಣ ಹಾಗೆ ಹೀಗೆ ತಿರುಗಾಡಿದನು. ಮಂಟಪದ ಮೂಲೆಯಲ್ಲಿ ಒರೆ ಕಳಚಿದ್ದ ಒಂದು ಕತ್ತಿ ಕಂಡಿತು. ದಮಯಂತಿ ಉಟ್ಟಿದ್ದ ಬಟ್ಟೆಯನ್ನು ಎರಡು ಪಾಲಾಗಿ ಉಪಾಯದಿಂದ ಕತ್ತರಿಸಿ ಅದರಿಂದ ತನ್ನ ಮೈ ಮುಚ್ಚಿಕೊಂಡನು. ಒಳಗೆ ಎದೆ ಕರಗಿ ನೀರಾಗಿತ್ತು. ಆದರೆ ಕಲಿಯ ಮೋಹದ ಬಲ ಹೆಚ್ಚಾಗಿ, ನಿದ್ರಿಸುತ್ತಿದ್ದ ಹೆಂಡತಿಯನ್ನು ಅಲ್ಲಿಯೇ ಬಿಟ್ಟು ಹಲುಬುತ್ತ ಅಲ್ಲಿಂದ ಹೊರಟು ಸ್ವಲ್ಪ ದೂರ ಹೋದನು ಪುನಃ ಮನಸ್ಸೊಪ್ಪದೆ ಹಿಂದಕ್ಕೆ ಬಂದನು. ಹೆಂಡತಿಯ ಸ್ಥಿತಿಗೆ ಮರುಕ ಬಂತು. ಎಂಥವಳಿಗೆ ಎಂಥ ಗತಿ! ನಾನು ಹೋಗಿರುವುದನ್ನು ಕಂಡು ಆಕೆ ಎಚ್ಚರಗೊಂಡು ಎಷ್ಟು ಹುಚ್ಚಾದಾಳು! ಒಂಟಿಯಾಗಿ ಈ ಘೋರ ವನದಲ್ಲಿ ಹೇಗೆ ಸಂಚರಿಸಿ ಯಾಳು ಎಂದು ಆಕೆಯನ್ನು ನೋಡಿ ಬಹುವಾಗಿ ಅತ್ತನು. ಆದರೇನು? ಅವನ ಸೌಹಾರ್ದ ದುರ್ಬಲವಾಯಿತು: ಹೋಗುವುದೇ ಉಳಿಯುವುದೇ ಎಂದು ಹೃದಯದಲ್ಲಿ ಪುನಃ ಹಾಗೂ ಹೀಗೂ ತೂಗುಯ್ಯಾಲೆಯಂತೆ ಆದನು. ಕಡೆಗೆ ಕಲಿಗೇ ಜಯವಾಗಿ ನಿದ್ರಿಸುತ್ತಿದ್ದ ಹೆಂಡತಿಯನ್ನು ಅಲ್ಲಿಯೇ ಬಿಟ್ಟು ಅಳುತ್ತ ನಳನು ಹೊರಟುಹೋದನು.

೪

ಇದಾದ ಸ್ವಲ್ಪ ಕಾಲದಮೇಲೆ ದಮಯಂತಿಗೆ ಎಚ್ಚರವಾಯಿತು. ಜನವಿಲ್ಲದ ವನದಲ್ಲಿ ಭಯವಾಯಿತು. ಬಳಿಯಲ್ಲಿ ಗಂಡನಿಲ್ಲದ್ದು ಕಾಣಿಸಿತು. ಶೋಕ ದುಃಖಗಳಿಂದ ಮನಸ್ಸು ತುಂಬಿ ಗಟ್ಟಿಯಾಗಿ,

"ಹಾ ಹತಾಸ್ಮಿ ವಿನಷ್ಟಾಸ್ಮಿ ಭೀತಾಸ್ಮಿ ವಿಜನೇ ವನೇ
ನನು ನಾಮ ಮಹಾರಾಜ ಧರ್ಮಜ್ಞಃ ಸತ್ಯವಾಗಸಿ
ಕಥಮುಕ್ತ್ವಾ ತಥಾಸತ್ಯಂ ಸುಪ್ತಾಮುತ್ಸೃಜ್ಯ ಮಾಂ ಗತಃ

ಅಥವಾ, ಪೊದೆಗಳಲ್ಲಿ ಬಚ್ಚಿಟ್ಟುಕೊಂಡು ನನಗೆ ಉತ್ತರ ಕೊಡುತ್ತಿಲ್ಲವೋ! ಅಳುತ್ತಿರುವ ನನ್ನನ್ನಪ್ಪಿಕೊಂಡು ಆಶ್ವಾಸನಕೊಡದೆ ಎಲ್ಲಿರುವಿರಿ? ನಾನು ಶೋಕಿಸುತ್ತಿರುವುದು ನನಗಾಗಿಯಲ್ಲ ನಿಮಗಾಗಿ. ಒಂಟಿಯಾಗಿ ನೀವು ಹೇಗೆ ಇರಬಲ್ಲಿರಿ? ಬಾಯಾರಿ, ಹಸಿದು ಶ್ರಮದಿಂದ ಕೃಶರಾಗಿ ಸಂಜೆ ಹಗಲುಗಳಲ್ಲಿ ಮರಗಳಡಿಯಲ್ಲಿ ನನ್ನನ್ನು ಕಾಣದೆ ಹೇಗೆ ವಾಸಮಾಡೀರಿ? ಜನವಿಲ್ಲದ ಈ ಕಾಡಿನಲ್ಲಿ ನನಗೆ ಭಯವಾಗುತ್ತದೆ" ಎಂದು ಕೂಗಿಕೊಂಡಳು. ಕಾಡು ಮಾರ್ದನಿ ಕೊಟ್ಟಿತು. ಆಕೆಯ ರೋದನದಿಂದ ಕಾಡು ತುಂಬಿತು. ದುಃಖಿತೆಯಾದ ದಮಯಂತಿ ಇಲ್ಲಿಂದ ಅಲ್ಲಿಗೆ ಅಳುತ್ತ ಓಡಿಯಾಡಿದಳು. ವಿಹ್ವಲಳಾಗಿ ಕೆಳಗೆ ಕೆಳಗೆ ಬೀಳುವಳು, ಏಳುವಳು; ಭಯದಿಂದ ನಡುಗುವಳು; ಬಳಲುವಳು; ಅಳುವಳು; ಮೇಲೆ ಮೇಲೆ ಸಿಟ್ಟುಸಿರಿಡುವಳು; ಪುನಃ ಭಯದಿಂದ ಅಲ್ಲಿ ಇಲ್ಲಿ ಅವಿತುಕೊಳ್ಳುವಳು. ಗಂಡನ ಹೆಸರು ಹಿಡಿದು ಕೂಗುತ್ತ ಗಟ್ಟಿಯಾಗಿ ಅಳುತ್ತ ನಿರಪರಾಧಿಯಾದ ನಳನನ್ನು ಈ ಕಷ್ಟಕ್ಕೆ ಈಡುಮಾಡಿದ ಪಾಪಿ ಕಲಿಗೆ ತನಗೆ ಬಂದುದಕ್ಕಿಂತ ಹೆಚ್ಚು ಅಧಿಕವಾದ ದುಃಖವೂ ಕಷ್ಟವೂ ಉಂಟಾಗಲಿ ಎಂದು ಶಾಪವನ್ನು ಕೊಟ್ಟಳು. ಈ ಸ್ಥಿತಿಯಲ್ಲಿ ಕುರರಿಯ ಹಾಗೆ ಕೂಗುತ್ತ ಒಣಗಿ, ಬಾಡಿ ಓಡುತ್ತಿರಲು, ದಾರಿಯಲ್ಲಿ ಒಂದು ಅಜಗರ ಆಕೆಯನ್ನು ಹಿಡಿದು ನುಂಗತೊಡಗಿತು. ಆಕೆಯ ಪುಣ್ಯದಿಂದ ಹಾವು ಆಕೆಯನ್ನು ನುಂಗಿಬಿಡುವ ಮುಂಚೆಯೇ ಬೇಡನೊಬ್ಬನು ಆ ಬಳಿಗೆ ಬಂದು ತನ್ನಲ್ಲಿದ್ದ ಹರಿತವಾದ ಆಯುಧದಿಂದ ಬಾಯಿಂದ ಹಿಡಿದು

ಬಾಲದವರೆಗೂ ಅದರ ಮೈಯನ್ನು ಸೀಳಿ ಹಾವನ್ನು ಕೊಂದನು. ಆಕೆಯನ್ನು ಬಿಡಿಸಿದನು. ಹಾವಿಂದಲೇನೊ ಬಿಡುಗಡೆ ಆಯಿತು; ಆದರೆ ಅವಳ ಕಥೆಯನ್ನೂ ಸ್ಥಿತಿಯನ್ನೂ ಕೇಳಿ ತಿಳಿದುಕೊಂಡ ಬೇಡನಿಗೆ ಆಕೆಯ ಅರೆಮುಚ್ಚಿದ ಮೈ ಸೊಬಗೂ ಮೃದುಭಾಷಣವೂ ಮೋಹವನ್ನುಂಟುಮಾಡಿದವು. ಆ ಬೇಡನ ಕಾಮಕ್ಕೆ ಆಕೆ ಗುರಿಯಾಗಬೇಕಾಗುವಂತೆ ಕಂಡಿತು. ದಮಯಂತಿಯ ದುಃಖ ಹೇಳತೀರದು. ಒಂದು ಕಡೆ ದುಃಖದಿಂದ ದೀನಳಾಗಿದ್ದಾಳೆ. ಇನ್ನೊಂದು ಕಡೆ ಬೆರಳಿಂದ ತಲೆಯವರೆಗೂ ಕೋಪದಿಂದ ಉರಿಯುತ್ತಿದ್ದಾಳೆ. ಆ ಕೋಪದಲ್ಲಿ ಆಕೆ ಬೇಡನಿಗೆ ಶಾಪವಿಟ್ಟಳು. ಪತಿವ್ರತೆಯಾದ ಆಕೆಯ ಶಕ್ತಿಯಿಂದ, ಸುಟ್ಟ ಮರ ಕೆಳಗೆ ಬೀಳುವಂತೆ ಆ ಬೇಡನು ಕೆಳಗೆ ಬಿದ್ದು ಸತ್ತನು.

ಮೂರು ಹಗಲು ಮೂರು ರಾತ್ರಿ ಘೋರಾರಣ್ಯದಲ್ಲಿ ಹುಚ್ಚಳಂತೆ ತೊಳಲಿ ಬಳಲಿ ಕಡೆಗೆ ಒಂದು ಆಶ್ರಮಕ್ಕೆ ಬಂದಳು. ಮುದುಕರಾದ ಅಲ್ಲಿನ ತಾಪಸರಿಗೆ ಬಾಗಿ ನಮಸ್ಕಾರ ಮಾಡಿದಳು. ವಿನಯದಿಂದ ಅವರ ಬಳಿಯಲ್ಲಿ ನಿಂತುಕೊಂಡಳು. ತನ್ನ ಪರಿಚಯವನ್ನು ಅವರಿಗೆ ಮಾಡಿಕೊಟ್ಟಮೇಲೆ ಅವರು, –

" ತಾಯಿ, ನಿನಗೆ ಒಳ್ಳೆಯದಾಗುವುದು; ಮುಂದಾಗುವುದೆಲ್ಲ ತಪಶ್ಶಕ್ತಿಯಿಂದ ನಮಗೆ ಕಾಣುತ್ತದೆ. ಕಾತರ ಬೇಡ. ಬೇಗ ನೀನು ನಳನನ್ನು ನೋಡುವೆ " ಎಂದು ಹೇಳಿ ಆಕೆಯ ದುಃಖವನ್ನು ಆರಿಸಿದರು. ಹೀಗೆ ಹೇಳಿ ಕೂಡಲೆ ಮಾಯವಾದರು. ಪುನಃ ನೋಡಿದರೆ ಅಲ್ಲೇನಿದೆ? ಆಶ್ರಮವಿಲ್ಲ, ಅಗ್ನಿಹೋತ್ರವಿಲ್ಲ, ತಪಸ್ವಿಗಳಿಲ್ಲ. ಆಕೆಗೆ ಇದೆಲ್ಲ ಬಹು ಚೋದ್ಯವಾಗಿ ಕಂಡಿತು. ಆದುದರಿಂದ ಇನ್ನೂ ಮುಂದೆ ನಡೆದು ವ್ಯಾಪಾರಕ್ಕಾಗಿ ವಸ್ತು ಸಂಪತ್ತುಗಳನ್ನು ತೆಗೆದುಕೊಂಡು ಹೋಗುತ್ತಿದ್ದ ಒಂದು ವರ್ತಕರ ಗುಂಪಿನಲ್ಲಿ ಸೇರಿಕೊಂಡು ಸಂಜೆಗೆ ಸತ್ಯವಾದಿಯಾದ ಸುಬಾಹುವಿದ್ದ ಚೇದಿರಾಜ್ಯವನ್ನು ಸೇರಿದಳು.

ಸ್ವಲ್ಪ ಸಮಯದೊಳಗಾಗಿ ರಾಜನ ಅರಮನೆಯ ಮುಂದೆ ವಿವರ್ಣೆಯಾಗಿ, ಕೃಶಳಾಗಿ, ದೀನಳಾಗಿ, ತಲೆಗೂದಲು ಕೆದರಿದವಳಾಗಿ, ಮೈಗೆ

ಸೀರಿಲ್ಲದೆ, ಒಡಲನ್ನು ಅರೆ ಮುಚ್ಚಿದ್ದ ಉಡುಗೆಯಲ್ಲಿ ಹುಚ್ಚಳಂತೆ ಹೋಗುತ್ತಿದ್ದ ಅವಳನ್ನು ಹುಡುಗರು ಮುತ್ತಿಕೊಂಡು ಕಾಡುತ್ತಿರುವುದನ್ನು ನೋಡಿದ ರಾಜಮಾತೆ ಅವಳನ್ನು ತನ್ನ ಬಳಿಗೆ ಕರಸಿಕೊಂಡಳು. ಅಲ್ಲಿ ಹೋಗಿ ಸೇರಿದ ದಮಯಂತಿ, ತನ್ನ ಮತ್ತು ಗಂಡನ ಹೆಸರು ಹೊರತು ಉಳಿದ ಸಂಗತಿಗಳನ್ನು ಆಕೆಗೆ ತಿಳಿಸಿದಳು. ತಾನು ಅಂತಃಪುರದಲ್ಲಿ ಸ್ತ್ರೀಯರಿಗೆ ಅಲಂಕಾರ ಮಾಡಿಕೊಂಡಿರುವ ಸೈರಂಧ್ರಿಯೆಂದೂ ತನ್ನ ಗಂಡನಿಗೆ ತನ್ನಲ್ಲಿ ತುಂಬಾ ಪ್ರೀತಿಯೆಂದೂ ಜೂಜಾಡಿ ಆತನು ಕಾಡು ಪಾಲಾದಾಗ ತಾನೂ ಆತನೊಡನಿದ್ದು ಆತನು ತನ್ನನ್ನು ಬಿಟ್ಟುಹೋಗಲು ಕಷ್ಟಕ್ಕೀಡಾದಳೆಂದೂ ತಿಳಿಸಿದಳು. ಆಕೆಗೆ ದಮಯಂತಿಯನ್ನು ನೋಡಿ ಕರುಣೆ ಉಂಟಾಯಿತು. 'ಮಂಗಳೆ, ನೀನು ನಮ್ಮಲ್ಲೇ ಇರು; ನಿನ್ನ ಮೇಲೆ ನನಗೆ ಪ್ರೀತಿಯುಂಟಾಗಿದೆ. ನನ್ನ ಜನರು ಹೋಗಿ ನಿನ್ನ ಗಂಡನನ್ನು ಹುಡುಕಿ ತರುತ್ತಾರೆ. ಅಥವಾ ಅವನೇ ನಿನ್ನನ್ನು ಹುಡುಕಿ ಕೊಂಡು ಇಲ್ಲಿಗೆ ಓಡಿಬಂದಾನು. ನಿನ್ನ ಗಂಡನು ಬರುವವರೆಗೂ ನೀನಿಲ್ಲಿಯೇ ವಾಸಮಾಡಿಕೊಂಡಿರು' ಎಂದ ರಾಜಮಾತೆಗೆ ದಮಯಂತಿ, – 'ತಾಯಿ, ನನಗೆ ವ್ರತವೊಂದುಂಟು; ಅನ್ಯಪುರುಷರೊಡನೆ ನಾನು ಮಾತನಾಡುವುದಿಲ್ಲ; ನನ್ನನ್ನು ಗಂಡಸರಾರೇ ಆಗಲಿ ಪೀಡಿಸಿದ ಪಕ್ಷದಲ್ಲಿ ಅವರಿಗೆ ಮರಣದಂಡನೆ ಯನ್ನು ಮಾಡಬೇಕಾಗುವುದು. ಇದಕ್ಕೆ ತಾವು ಒಪ್ಪಿದರೆ ಮಾತ್ರ ನಾನು ತಮ್ಮಲ್ಲಿ ಉಳಿದುಕೊಳ್ಳುತ್ತೇನೆ' – ಎಂದಳು.

ರಾಣಿಗೆ ಈ ಮಾತನ್ನು ಕೇಳಿ ಹರ್ಷವಾಯಿತು. 'ಎಲ್ಲವನ್ನೂ ನೀನು ಹೇಳಿದ ಹಾಗೆ ಮಾಡಿಸುತ್ತೇನೆ; ನಿನ್ನ ವ್ರತವನ್ನು ಪಾಲಿಸಿಕೋ' ಎಂದು ನುಡಿದಳು.

ತನ್ನ ಮಗಳು ಸುನಂದಾದೇವಿಯನ್ನು ಕರೆದು ಸಮವಯಸ್ಸಿನ ಆ ಇಬ್ಬರೂ ಗೆಳತಿಯರಾಗಿ ಇರಬಹುದೆಂದು ಹೇಳಿ, ಮಗಳಿಗೆ ಸೈರಂಧ್ರಿ ಯಾಗಿರೆಂದು ಇವಳಿಗೆ ತಿಳಿಸಿ, ಸಮಾಧಾನ ಮಾಡಿ ಜೊತೆಗೆ ಕಳಿಸಿ ಕೊಟ್ಟಳು. ಎರಡು ದಿನ ಅಲ್ಲಿನ ಸುರಕ್ಷೆಯಲ್ಲಿ ದಮಯಂತಿ ಕಾಲ ಕಳೆದಳು.

## ೫

ಇತ್ತ ದಮಯಂತಿಯನ್ನು ಬಿಟ್ಟು ನಡೆದ ನಳನು ಸ್ವಲ್ಪ ದೂರ ಹೋಗುವಷ್ಟರಲ್ಲೇ ಒಂದು ಕಾಡುಕಿಚ್ಚು ಅವನ ಕಣ್ಣಿಗೆ ಬಿತ್ತು. ಅದರೊಳಗಿಂದ ಯಾವುದೋ ಜೀವಿ 'ಓ ಪುಣ್ಯಾತ್ಮ, ನಳ, ಬೇಗ ಬಾ, ಓಡಿ ಬಾ' ಎಂದು ಕೂಗುವ ಧ್ವನಿ ಮೇಲೆ ಮೇಲೆ ಕೇಳಿಸಿತು. 'ಭೀತಿ ಬೇಡ' ಎಂದು ನಳನು ಉತ್ತರ ಕೊಟ್ಟು ಆ ಉರಿಯೊಳಕ್ಕೆ ನುಗ್ಗಿದನು. ಅಲ್ಲಿ ಗುಂಡಗೆ ಸುತ್ತುಹಾಕಿಕೊಂಡಿದ್ದ ಮಹಾಸರ್ಪ ಒಂದು ಬಿದ್ದಿತ್ತು. ಭಯದಿಂದ ನಡುಗುತ್ತ ಅದು ನಳನನ್ನು ಬೇಡಿಕೊಂಡಿತು: "ರಾಜ, ನನ್ನ ಹೆಸರು ಕರ್ಕೋಟಕ. ಏನೂ ಅರಿಯದ ಒಬ್ಬ ಬ್ರಹ್ಮರ್ಷಿಗೆ ನಾನು ಹಿಂದೆ ಮೋಸ ಮಾಡಿದೆ. ಆತನು ಕೋಪಿಸಿಕೊಂಡು ನಳನು ನಿನ್ನ ಬಳಿಗೆ ಬರುವವರೆಗೂ ಕಲ್ಲಿನಂತೆ ಒಂದು ಕಡೆ ಬಿದ್ದಿರು ಎಂದು ಶಾಪಕೊಟ್ಟನು. ಆದ್ದರಿಂದ ಒಂದು ಹೆಜ್ಜೆಯೂ ಮುಂದೆ ಹೋಗಲಾರದೆ ಇಲ್ಲಿ ಬಿದ್ದಿದ್ದೇನೆ. ನಾನು ನಿನಗೆ ಗೆಳೆಯನಾಗುತ್ತೇನೆ; ನನ್ನಂಥ ಪನ್ನಗರಿನ್ನಾರೂ ಇಲ್ಲ; ಗಾತ್ರದಲ್ಲಿ ಇನ್ನಷ್ಟು ಚಿಕ್ಕದಾಗುತ್ತೇನೆ; ಬೇಗ ನನ್ನ ಬಳಿಗೆ ಬಾ" ಎಂದು ಒಂದು ಹೆಬ್ಬೆಟ್ಟಿನ ಗಾತ್ರವಾಯಿತು. ಕೂಡಲೆ ಅದನ್ನು ಎತ್ತಿಕೊಂಡು ನಳನು ಬೆಂಕಿಯ ಉರಿ ಇಲ್ಲದ ಸ್ಥಳಕ್ಕೆ ಹೋದನು. ಸರ್ಪವನ್ನು ಇಳಿಸಿ ಹೊರಡುವುದಕ್ಕೆ ಮುಂಚೆ ಅವನನ್ನು ನಿಲ್ಲಿಸಿ ಸರ್ಪ ಹೀಗೆ ಹೇಳಿತು, –'ಹೋಗುತ್ತ ಹೋಗುತ್ತ ಹತ್ತು ಹೆಜ್ಜೆಗಳನ್ನೆಣಿಸು; ನಿನಗೆ ಹಿತವನ್ನುಂಟುಮಾಡುತ್ತೇನೆ.' ಹೆಜ್ಜೆ ಎಣಿಸಿ ಹೋಗುತ್ತಿರುವಾಗ್ಗೆ ಹತ್ತನೆಯ ಹೆಜ್ಜೆಯಲ್ಲಿ ಅದು ಅವನನ್ನು ಕಚ್ಚಿತು. ಕಡಿದ ಒಡನೆಯೇ ಆತನ ರೂಪ ಕೆಟ್ಟಿತು. ವಿಕಾರವಾಯಿತು. ನಳನು ತನ್ನ ವಿಕೃತಿಯನ್ನು ಕಂಡು ಸೋಜಿಗ ಪಡುತ್ತ ನಿಲ್ಲಲು ಕರ್ಕೋಟಕವು ಅವನಿಗೆ ಸಮಾಧಾನ ಮಾಡಿ ಹೀಗೆಂದಿತು:

"ಅಯ್ಯಾ, ನಿನ್ನ ರೂಪವನ್ನು ನೋಡಿ ಇತರರು ಯಾರೂ ಗುರುತಿಸಲಾಗದಂತೆ ನಿನ್ನನ್ನು ಮಾರ್ಪಡಿಸಿದ್ದೇನೆ. ಅಷ್ಟೇ. ನಿನಗೆ ಇದರಿಂದ

ಕೇಡಿಲ್ಲ. ನಿನಗೆ ಯಾರು ಈ ಕಷ್ಟವನ್ನು ತಂದು ನಿನ್ನಲ್ಲೇ ಸೇರಿಕೊಂಡು ಹೀಗೆ ಕಾಡುತ್ತಿದ್ದಾನೋ ಆ ಕಲಿಯ ಮೇಲಿನ ಕೋಪದಿಂದ ನಿನ್ನನ್ನು ರಕ್ಷಿಸಬೇಕೆಂದು ಹೀಗೆ ಮಾಡಿದ್ದೇನೆ. ಈ ವಿಷದಿಂದ ಅವನಿಗೆ ದಾರುಣ ವಾದ ಸಂಕಟವಾಗುವುದು. ನಿನಗೆ ಯಾವ ಭಯವೂ ಬೇಡ. ಯಾವ ಶಸ್ತ್ರಗಳಿಂದಲೂ ಯಾವ ವಿಷದಂಶದಿಂದಲೂ ಇನ್ನುಮೇಲೆ ನಿನಗೆ ಭೀತಿ ಬೇಡ. ನನ್ನ ಪ್ರಸಾದದಿಂದ ನೀನು ಬ್ರಹ್ಮಜ್ಞನಾಗುವೆ. ಸಂಗ್ರಾಮದಲ್ಲಿ ನಿನಗೆ ಎಂದೆಂದಿಗೂ ಜಯವೇ ಆಗುವುದು. ಇಲ್ಲಿಂದ ಹೊರಡು. ಹತ್ತಿರ ದಲ್ಲಿ ಋತುಪರ್ಣನ ಅಯೋಧ್ಯಾ ಪಟ್ಟಣವಿದೆ. ಅಲ್ಲಿ ಹೋಗು. ನಿನ್ನ ಹೆಸರು ಬಾಹುಕನೆಂದೂ ನೀನು ಉತ್ತಮ ಸಾರಥಿಯೆಂದೂ ಹೇಳು. ಆತನಿಗೆ ಅಕ್ಷವಿದ್ಯೆ – ಪಗಡೆಯಾಟದ ಗುಟ್ಟು – ಗೊತ್ತು. ನೀನು ತಿಳಿದಿರುವ ಅಶ್ವಹೃದಯವನ್ನು ಅವನಿಗೆ ಕಲಿಸಿದರೆ ಅಕ್ಷವಿದ್ಯೆಯನ್ನು ಅವನು ನಿನಗೆ ಹೇಳಿಕೊಡುತ್ತಾನೆ. ನಿನಗೆ ಆಮೇಲೆ ನಿನ್ನ ಭಾಗ್ಯ ಮರಳುತ್ತದೆ. ಹೆಂಡಿರು ಮಕ್ಕಳ ಸಂಗ ಬೇಗ ದೊರಕುತ್ತದೆ. ನಿಜವನ್ನು ಹೇಳುತ್ತಿದ್ದೇನೆ, ಹೋಗು. ನಿನಗೆ ಬೇಕಾದಾಗ ನಾನು ಕೊಡುವ ಈ ಬಟ್ಟೆಯನ್ನು ಹೊದ್ದುಕೊಂಡು ನನ್ನನ್ನು ನೆನಸಿಕೋ. ನಿನ್ನ ದಿವ್ಯರೂಪ ಹಿಂದಕ್ಕೆ ಬರುತ್ತದೆ" ಎಂದು ಹೇಳಿ ಒಂದು ಜೊತೆ ದಿವ್ಯವಾದ ವಸ್ತ್ರಗಳನ್ನು ಕೊಟ್ಟಿತು. ಕೂಡಲೆ ಮಾಯವಾಯಿತು.

ಹತ್ತನೆಯ ದಿನ ಋತುಪರ್ಣನ ಪಟ್ಟಣಕ್ಕೆ ಹೋಗಿ ನಳನು ಬಾಹುಕನೆಂಬ ಹೆಸರಲ್ಲಿ ರಾಜನ ಊಳಿಗಕ್ಕೆ ನಿಂತನು. ಅಡಿಗೆ, ಸಾರಥ್ಯ, ಕಲೆ, ವಿದ್ಯೆ ಎಲ್ಲ ನನಗೆ ವಶವಾಗಿವೆ. ಇತರರಿಗೆ ಯಾವ ಶಿಲ್ಪ ಕಷ್ಟವೋ ಯಾವ ಕಾರ್ಯ ಅಶಕ್ಯವೋ ಅದನ್ನೆಲ್ಲ ನಾನು ಮಾಡಬಲ್ಲೆನೆಂದು ಹೇಳಿ, ಆತನ ಊಳಿಗದಲ್ಲಿದ್ದು ದಿನೇ ದಿನೇ ರಾಜನ ವಿಶ್ವಾಸವನ್ನು ಸಂಪಾದಿಸಿ ಕೊಂಡನು. ವೇಷ ಮರಸಿಕೊಂಡರೇನು ? ಎಲ್ಲಿದ್ದರೇನು ? ದಮಯಂತಿಯ ಚಿಂತೆಯೇ, ನೆನಪೇ ಅವನಿಗೆ.

## ೬

ನಳನಿಗೆ ದುರ್ದಶೆ ಬಂದದ್ದನ್ನು ಕೇಳಿ ದಮಯಂತಿಯ ತಂದೆ ಊರೂರಿಗೆ ಜನರನ್ನು ಕಳಿಸಿ ಮಗಳನ್ನೂ ಅಳಿಯನನ್ನೂ ಕಂಡು ತನ್ನಿ ಎಂದನು. ಕಷ್ಟಪಟ್ಟು ಕಡೆಗೆ ದಮಯಂತಿಯನ್ನು ಸುದೇವನೆಂಬ ಬ್ರಾಹ್ಮಣನ ಸಹಾಯದಿಂದ ಕಂಡುಹಿಡಿದು ತನ್ನ ಊರಿಗೆ ಕರಸಿಕೊಂಡನು. ನಳನ ಸ್ಥಳವಾಗಲಿ, ಇರವಾಗಲಿ ಗೊತ್ತಾಗಲಿಲ್ಲ. ದಮಯಂತಿಗೆ ತಂದೆಯ ಮನೆಯಲ್ಲಿದ್ದರೂ ಒಂದೇ; ಬೇರೆಲ್ಲಿದ್ದರೂ ಒಂದೇ. ಗಂಡನ ಗತಿಯೇನಾಯಿತೋ, ಆತನನ್ನೆಂದು ಕಾಣುವೆನೋ ಎಂಬುದೇ ಹಗಲೂ ಇರುಳೂ ಚಿಂತೆಯಾಗಿತ್ತು. ತಾಯಿಗೆ ಹೇಳಿದಳು: 'ನಿನಗೆ ನಾನು ಬದುಕಬೇಕೆಂಬ ಇಚ್ಛೆಯಿದ್ದರೆ ನಳನನ್ನು ಹುಡುಕಿಸಿ ಕರೆದುತರಲು ಯತ್ನಮಾಡು.' ಆಕೆ ಗಂಡನ ಬಳಿಗೆ ಹೋಗಿ – ' ನಿಮ್ಮ ಮಗಳು ಗಂಡನಿಗಾಗಿ ಶೋಕಿಸುತ್ತಿದ್ದಾಳೆ. ಏನಾದರೂ ಮಾಡಿ ತನ್ನ ಗಂಡನನ್ನು ಹುಡುಕಿ ತರಬೇಕೆಂದು ಲಜ್ಜೆಯನ್ನು ಬಿಟ್ಟು ತಾನೇ ನನಗೆ ಹೇಳಿದಳು ' – ಎಂದಳು. ಭೀಮರಾಜನು ಈ ಕಾರ್ಯಕ್ಕಾಗಿ ಹಲವಾರು ಬ್ರಾಹ್ಮಣರನ್ನು ನಿಯೋಜಿಸಿದನು. ಅವರು ತಮ್ಮ ಪ್ರಯಾಣದ ಉದ್ದೇಶವನ್ನು ದಮಯಂತಿಗೆ ತಿಳಿಸಲು ಬಂದಾಗ ಆಕೆ ಅವರಿಗೆ ಹೇಳಿದಳು : " ಎಲ್ಲ ರಾಷ್ಟ್ರಗಳಿಗೂ ಹೋಗಿ; ಜನರು ಸೇರುವಲ್ಲೆಲ್ಲ ಈ ವಾಕ್ಯಗಳನ್ನು ಮೇಲೆ ಮೇಲೆ ಘೋಷಿಸಿ :

' ಓ ಮೋಸಗಾರ, ನಾನುಟ್ಟ ಬಟ್ಟೆಯನ್ನು ಎರಡಾಗಿ ಹರಿದು ತೆಗೆದುಕೊಂಡು ಎಲ್ಲಿಗೆ ಹೋದೆ? ಮಲಗಿ ನಿದ್ರಿಸುವ ಹೆಂಡತಿಯನ್ನು ಕಾಡಿನಲ್ಲಿ ಬಿಟ್ಟು ಹೋದೆಯಲ್ಲ. ಅವಳ ಗತಿಯೇನು ? ಆದರೂ ಅವಳಿಗೆ ಎಷ್ಟು ಅನುರಾಗ ನಿನ್ನಲ್ಲಿ ! ನಿನಗೆ ಎಷ್ಟು ಪ್ರಿಯಳು ಅವಳು ! ಅವಳನ್ನು ನೀನು ಬಿಟ್ಟು ಹೋದಾಗ-ಹೇಗೋ ಈಗಲೂ ಹಾಗೆಯೇ ಅರೆಬಟ್ಟೆಯಲ್ಲಿಯೇ ಇದ್ದಾಳೆ. ನಿನಗೆ ಕಾಯುತ್ತ ಕಾದಿದ್ದಾಳೆ. ಆಕೆಗೆ ಕೃಪೆಮಾಡು. ಉತ್ತರವಾಗಿ ಎರಡು ಮಾತನ್ನು ಹೇಳಿಕಳಿಸು ' ಎನ್ನಿ. ಇದನ್ನು ಕೇಳಿ

ದವರು ಯಾರಾದರೂ ಇದಕ್ಕೆ ಉತ್ತರ ಹೇಳಿದರೆ, ಬ್ರಾಹ್ಮಣರೆ, ಅದನ್ನು ತಂದು ನನಗೆ ತಿಳಿಸಿ. ಅಂಥವನು ಧನಸಮೃದ್ಧಿಯುಳ್ಳವನಾಗಲಿ, ಬಡವನಾಗಲಿ, ಹಣದ ಆಸೆಯುಳ್ಳವನಾಗಲಿ ಅವನಿಗೆ ಸಂಬಂಧಿಸಿದ ಎಲ್ಲ ಸಂಗತಿಗಳನ್ನೂ ವಿಚಾರಿಸಿಕೊಂಡು ಬನ್ನಿ – ದಾರಿಯಲ್ಲಿ ನಿಮಗೆ ಒಳ್ಳೆಯದಾಗಲಿ" ಎಂದಳು.

ಬ್ರಾಹ್ಮಣರು ಹೊರಟರು. ದಿಕ್ಕುದಿಕ್ಕಿಗೂ ಸಂಚಾರಮಾಡಿದರು. ಆಕೆ ಹೇಳಿದ ಹಾಗೆ ಎಲ್ಲೆಲ್ಲೂ ತಡಕಿದರು. ಎಲ್ಲೆಲ್ಲೂ ಆ ಮಾತುಗಳನ್ನು ಸಾರಿದರು. ಬಹುಕಾಲವಾದ ಮೇಲೆ ಪರ್ಣಾದನೆಂಬ ಒಬ್ಬ ಬ್ರಾಹ್ಮಣನು ಕುಂಡಿನಪುರಕ್ಕೆ ಹಿಂತಿರುಗಿ ದಮಯಂತಿಯ ಬಳಿಗೆ ಬಂದು ಈ ರೀತಿ ತಿಳಿಸಿದನು :

"ತಾಯಿ, ನಳಮಹಾರಾಜನನ್ನು ಹುಡುಕುತ್ತ ಎಲ್ಲೆಲ್ಲಿಯೂ ಸುತ್ತಿ ಕಡೆಗೆ ಋತುಪರ್ಣನ ಊರಿಗೆ ಹೋದೆ. ಎಲ್ಲಿನಂತೆಯೇ ಅಲ್ಲಿ ನಿನ್ನ ಮಾತನ್ನು ಜನಕ್ಕೆ ಹೇಳಿದೆ. ಅರಸನಾಗಲಿ ಆತನ ಸಭೆಯವರಾಗಲಿ ಏನೊಂದನ್ನೂ ಆಡಲಿಲ್ಲ. ಅರಸನಿಗೆ ಒಬ್ಬ ಸಾರಥಿಯಿದ್ದಾನೆ. ಅವನ ಹೆಸರು ಬಾಹುಕ. ತೋಳು ಮೋಂಡು; ಅಂಗದಲ್ಲಿ ವಿಕಾರಿ; ಕುದುರೆಗಳನ್ನು ಬಹು ವೇಗವಾಗಿ ನಡಸಬಲ್ಲವನು ; ರುಚಿಯಾದ ಅಡಿಗೆ ಮಾಡಬಲ್ಲವನು ; ಅವನು ಏಕಾಂತದಲ್ಲಿ ನನ್ನನ್ನು ಕುರಿತು ಒಂದೆರಡು ಮಾತುಗಳನ್ನು ಹೇಳಿದನು. ನನ್ನ ಮಾತನ್ನು ಕೇಳಿ ಅವನು ಹಲಬಾರಿ ನಿಟ್ಟುಸಿರಿಟ್ಟನು. ಪುನಃ ಪುನಃ ಅವನ ಕಣ್ಣು ತುಂಬ ನೀರು ತುಂಬಿತು. ನನ್ನ ಕುಶಲವನ್ನು ಕೇಳಿ ವಿಚಾರಿಸಿದನು. ಆಮೇಲೆ ಹೀಗೆ ಹೇಳಿದನು :–

'ಉತ್ತಮ ಕುಲದಲ್ಲಿ ಹುಟ್ಟಿದ ಹೆಂಗಸರು ಚಾರಿತ್ರವೆಂಬ ಕವಚವನ್ನು ತೊಟ್ಟು, ತಮ್ಮನ್ನು ಕಾಪಾಡಿಕೊಳ್ಳುತ್ತ, ಎಷ್ಟೇ ಕಷ್ಟವೊದಗಿದರೂ ಪ್ರಾಣವನ್ನು ಉಳಿಸಿಕೊಳ್ಳುವರು. ಆಕೆಯನ್ನು ಬಿಟ್ಟುಹೋದಾಗ ಅವನ ಬುದ್ಧಿ ಅವನದಾಗಿರಲಿಲ್ಲ. ಮನಸ್ಸಿನಲ್ಲಿ ಸುಖವಿರಲಿಲ್ಲ. ಕಷ್ಟಸ್ಥಿತಿಯಲ್ಲಿದ್ದ. ಆದುದರಿಂದ ಅವನ ಮೇಲೆ ಕ್ರೋಧ ಬೇಡ. ಆಹಾರಕ್ಕಾಗಿ ಹಕ್ಕಿಗಳನ್ನು ಹಿಡಿಯಲು ಪ್ರಯತ್ನಿಸುತ್ತ ತನ್ನ ಬಟ್ಟೆಗಳನ್ನು ಕಳೆದುಕೊಂಡವನು ಏನು

ಮಾಡಿಯಾನು ? ಮನಸ್ಸಿನ ವ್ಯಥೆ ಅವನನ್ನು ಸುಡುತ್ತಿತ್ತು. ಆದ್ದರಿಂದ ಅವನ ಮೇಲೆ ಕ್ರೋಧ ತಕ್ಕದ್ದಲ್ಲ '

ಈ ಮಾತನ್ನು ಕೇಳಿದ ಕೂಡಲೆ ದಮಯಂತಿಗೆ ಒಂದೇ ಸಮಯದಲ್ಲಿ ದುಃಖವೂ ಆಯಿತು, ಸಂತೋಷವೂ ಆಯಿತು. ಕಣ್ಣಲ್ಲಿ ಗಳಗಳನೆ ನೀರು ಸುರಿಯಿತು. ತಾಯಿ ಬಳಿಗೆ ಗುಟ್ಟಾಗಿ ಹೋದಳು. ತಾನು ಸುದೇವನನ್ನು ಕರಸಿ ಒಂದು ಮಾತನ್ನು ಹೇಳಿ ಆತನನ್ನು ಅಯೋಧ್ಯೆಗೆ ಕಳಿಸುವಳೆಂದೂ ತಾಯಿಗೆ ತನ್ನ ಮೇಲೆ ಪ್ರೀತಿಯಿರುವುದಾದರೆ ಅದು ತಂದೆ ಭೀಮರಾಜನಿಗೆ ತಿಳಿಯಕೂಡದೆಂದೂ ಬೇಡಿದಳು. ಸುದೇವನು ತನ್ನನ್ನು ಹೇಗೆ ಕರೆತಂದನೋ ನಳನನ್ನು ಹಾಗೆಯೇ ತನ್ನಲ್ಲಿಗೆ ತರುವುದಕ್ಕೆ ಅದೊಂದೇ ಮಾರ್ಗವೆಂದು ತಿಳಿಸಿದಳು. ಸುದೇವನನ್ನು ಕರಸಿ, "ಹಿರಿಯರೆ, ಋತುಪರ್ಣನ ಪಟ್ಟಣಕ್ಕೆ ಹೋಗಿ ಬನ್ನಿ. ನನ್ನ ಜೀವ ಉಳಿಸಿ. 'ಭೀಮಮಹಾರಾಜನ ಮಗಳು ದಮಯಂತಿ ಬೇರೊಬ್ಬ ಪತಿಯನ್ನು ವರಿಸಲು ಇಚ್ಛಿಸುತ್ತಾಳೆ. ವೀರ ನಳನು ಬದುಕಿದ್ದಾನೋ ಇಲ್ಲವೋ ಆಕೆಗೆ ತಿಳಿಯದು. ಪುನಃ ಸ್ವಯಂವರ ಏರ್ಪಟ್ಟಿದೆ. ಹಲವು ರಾಜರು ಅಲ್ಲಿಗೆ ಹೋಗುವವರಿದ್ದಾರೆ. ನಿಮಗೆ ಇಷ್ಟವಾದರೆ ನೀವೂ ಬೇಗ ಹೋಗಿ. ನಾಳೆ ಬೆಳಗ್ಗೆಯೇ ಸ್ವಯಂವರ' ಎಂದು ಋತುಪರ್ಣನಿಗೆ ತಿಳಿಸಿ" ಎಂದಳು.

ಆತನು ಹಾಗೆಯೇ ಮಾಡಿ ಋತುಪರ್ಣನಿಗೆ ವರ್ತಮಾನ ಕೊಟ್ಟನು.

ಈ ಸುದ್ದಿಯನ್ನು ಕೇಳಿ ಋತುಪರ್ಣನಿಗೆ ಆಸೆ ಕೆರಳಿತು. ದಮಯಂತಿಯನ್ನು ಪಡೆಯಬೇಕೆಂಬ ಇಚ್ಛೆಯಿಂದ ಬಾಹುಕನನ್ನು ಕರೆಯ ಕಳಿಸಿದನು. ಮೃದುವಾಗಿ ಅವನೊಡನೆ ಮಾತಾಡಿದನು: – 'ಬಾಹುಕ, ದಮಯಂತಿಗೆ ಪುನಃ ಸ್ವಯಂವರವಂತೆ; ನನಗೆ ಹೋಗಬೇಕೆನ್ನಿಸುತ್ತಿದೆ. ಕುದುರೆಯ ಹೃದಯ ಬಲ್ಲ ನೀನು ಒಂದು ದಿವಸದಲ್ಲಿ ನನ್ನನ್ನು ಅಲ್ಲಿಗೆ ಕರೆದುಕೊಂಡು ಹೋಗುವ ಉಪಕಾರ ಮಾಡಬೇಕು. ಇಂಥ ಕಾರ್ಯ ನಿನ್ನೊಬ್ಬನಿಗೆ ಮಾತ್ರ ಶಕ್ಯ' ಎಂದನು.

ನಳನಿಗೆ ವ್ಯಥೆಯಾಯಿತು. ಒಳಗೆ ಎದೆ ತುಂಬಿ ಬಿರಿಯುವಂತಿತ್ತು. 'ಇದೇನು ಬಂತು ದಮಯಂತಿಗೆ ದುರ್ಬುದ್ಧಿ ! ದುಃಖ ತಾಳಲಾರದೆ

ಆಕೆಯ ಬುದ್ಧಿ ಕೆಟ್ಟಿತೇನು ? ನಾನು ಅವಳಿಗೆ ತುಂಬಾ ಅನ್ಯಾಯ ಮಾಡಿದೆನಾದರೂ ಅವಳು ನನ್ನಲ್ಲಿ ಸೌಹಾರ್ದವನ್ನು ತೊರೆದು ಈ ಯೋಚನೆ ಮಾಡಬಹುದೆ ? ಅಥವಾ ನನ್ನನ್ನು ಬರಮಾಡಿಕೊಳ್ಳುವುದಕ್ಕಾಗಿ ಈ ಉಪಾಯವನ್ನೇನಾದರೂ ಹೂಡಿದ್ದಾಳೆಯೊ ? ' ಎಂದು ಚಿಂತಿಸಿ, ' ಆಗಲಿ' ಅಲ್ಲಿಗೇ ಹೋಗಿ ಇದರ ಸತ್ಯವನ್ನು ತಿಳಿಯುತ್ತೇನೆ. ಬರಿಯ ಋತುಪರ್ಣ ನಿಗಾಗಿಯೇ ಏಕೆ, ನನಗೋಸ್ಕರ ಕೂಡ ರಾಜನು ಹೇಳಿದುದನ್ನು ಮಾಡುತ್ತೇನೆ ' ಎಂದುಕೊಂಡನು. ರಾಜನು ಹೇಳಿದಂತೆ ಕುಂಡಿನಪುರಕ್ಕೆ ಅವನನ್ನು ಒಂದು ದಿವಸದೊಳಗಾಗಿ ಒಯ್ಯಲು ಮಾತು ಕೊಟ್ಟನು.

## ೭

ಬಾಹುಕನ ಮನಸ್ಸು ದೀನವಾಗಿತ್ತು. ಉತ್ತಮವಾದ ಕುದುರೆ ಗಳನ್ನು ಆರಿಸಿಕೊಂಡನು. ದೂರ ಹೋಗಬಲ್ಲವಾಗಿಯೂ ದೇಹದಲ್ಲಿ ತೆಳ್ಳಗೂ ಇರುವವನ್ನು ಆರಿಸಿದನು. ರಾಜನಿಗೆ ಆಸೆಯ ಆತುರ. ತ್ವರೆ ಯಿಂದ ರಥವೇರಿದನು. ವಿದರ್ಭಕ್ಕೆ ಪ್ರಯಾಣ ನಡೆಯಿತು. ಬಾಹುಕನ ಕೈಯಲ್ಲಿ ಕುದುರೆಗಳು ಓಡಿಯೇ ಓಡಿದವು. ವಾರ್ಷ್ಣೇಯನು ಬಾಹುಕನ ಬಳಿಯಲ್ಲಿ ಕುಳಿತು ಇದನ್ನೆಲ್ಲ ನೋಡುತ್ತ ಕುದುರೆಗಳನ್ನು ನಡಸುವ ಈತನ ಜಾಣ್ಮೆಗೆ ಅಚ್ಚರಿಪಟ್ಟನು. 'ಇವನೇನು ಮಾತಲಿಯೋ ನಳ ಮಹಾರಾಜನೋ. ಈ ಬಾಹುಕನ ಜ್ಞಾನವೂ ಕುಶಲತೆಯೂ ಅವರಿಗೆ ಸಮಾನವಾಗಿರುವಂತೆ ಕಾಣುವುದು. ನೈಮರಸಿಕೊಂಡು ಮಹಾತ್ಮನಾದ ನಳನು ಎಲ್ಲಿಯೋ ಇರಬೇಕೆಂದು ಕೇಳಿದ್ದೇನೆ. ಇವನಿಗೂ ಅದೇ ವಯಸ್ಸು ; ರೂಪ ಮಾತ್ರ ವಿಪರೀತ. ಈ ಮಹಾತ್ಮನಾರೋ. ನನಗಂತೂ ಈ ಬಾಹುಕನೇ ಪ್ರಚ್ಛನ್ನ ನಳಮಹಾರಾಜನೆನ್ನಿಸುತ್ತದೆ ' ಎಂದು ಯೋಚಿಸು ತ್ತಿದ್ದನು. ಗಾಳಿಯಲ್ಲಿ, ಆಕಾಶದಲ್ಲಿ ಹಕ್ಕಿ ರೆಕ್ಕೆತೆರೆದು ಹಾರುವಂತೆ ಕುದುರೆ ಗಳು ಓಡಿದವು. ಒಳಗೆ ಕುಳಿತಿದ್ದವರಿಗೆ ತಿಳಿವು ತಪ್ಪುವಷ್ಟು ವೇಗದಲ್ಲಿ ರಥ ಓಡಿತು. ದಾರಿಯಲ್ಲೊಂದುಕಡೆ ಋತುಪರ್ಣನ ಉತ್ತರೀಯ ಜಾರಿ ಕೆಳಗೆ

ಬಿದ್ದುಹೋಯಿತು. "ತಡೆ ತಡೆ, ಬಾಹುಕ, ಉತ್ತರೀಯ ಕೆಳಕ್ಕೆ ಬಿತ್ತು, ತೆಗೆದುಕೊಳ್ಳೋಣ. ವಾರ್ಷ್ಣೇಯನು ಅದನ್ನು ತಗುವವರೆಗೂ ಕುದುರೆಗಳನ್ನು ಸ್ವಲ್ಪ ತಡೆ" ಎಂದು ಕೂಗಿಹೇಳಿದನು. "ಒಡೆಯ, ನಿಮ್ಮ ಬಟ್ಟೆ ಬಹು ಹಿಂದೆ ಬಿದ್ದುಹೋಗಿರಬೇಕು. ಒಂದು ಯೋಜನ ದೂರವಿದೆ ಇಲ್ಲಿಂದ ಅಲ್ಲಿಗೆ" ಎಂದು ಉತ್ತರ ಬಂದಿತು. ರಾಜನಿಗೆ ಪ್ರೀತಿಯಾಗಲಿಲ್ಲ. ಇಷ್ಟು ಹೊತ್ತಿಗೆ ಕಾಡಿನಲ್ಲಿ ಒಂದು ತಾರೆಯ ಮರ ಸಿಕ್ಕಿತು. "ಸಾರಥಿ, ಈಗ ನನ್ನ ಸಾಮರ್ಥ್ಯವನ್ನು ತೋರಿಸುತ್ತೇನೆ, ನೋಡು. ಎಲ್ಲರಿಗೂ ಎಲ್ಲವೂ ತಿಳಿದಿರುವುದಿಲ್ಲ. ಯಾರೂ ಸರ್ವಜ್ಞರಲ್ಲ. ನನಗೆ ಸಂಖ್ಯಾಶಾಸ್ತ್ರ ಗೊತ್ತಿದೆ. ಆ ಮರದಲ್ಲಿ ಎಲೆ, ಹಣ್ಣು ಎಣಿಸು ಹೋಗು. ಮರದ ಮುಖ್ಯವಾದ ಆ ಎರಡು ಶಾಖೆಗಳಲ್ಲಿಯೂ ಒಟ್ಟಿಗೆ ಐದು ಕೋಟಿ ಎಲೆಗಳಿವೆ. ೨೧೫೫ ಹಣ್ಣುಗಳಿವೆ" ಎಂದನು. ಇದನ್ನು ಪ್ರತ್ಯಕ್ಷವಾಗಿ ತಿಳಿಯಬೇಕೆಂದು ಕುದುರೆಗಳ ಕಡಿವಾಣವನ್ನು ವಾರ್ಷ್ಣೇಯನು ಕ್ಷಣಕಾಲ ಹಿಡಿದಿರಲೆಂದು ಹೇಳಿ ನಳನು ಕೆಳಗಿಳಿದನು. 'ಗಿಡದ ಈ ಎರಡು ಕೊಂಬೆಗಳನ್ನು ಕೆಡಹಿ ನಿಮ್ಮ ಮಾತಿನ ನಿಜವನ್ನು ಈಗ ಪರೀಕ್ಷಿಸಿ ನೋಡುತ್ತೇನೆ. ನಿಮ್ಮೆದುರಿಗೇ ಹಣ್ಣುಗಳನ್ನು ಎಣಿಸುತ್ತೇನೆ' ಎಂದನು. ರಾಜನು 'ಎಣಿಸು' ಎಂದನು

ರಾಜನೆಂದುದು ಒಂದಲ್ಲ; ಲೆಕ್ಕ ಬೇರೆಯಲ್ಲ. ಲೆಕ್ಕ ಸರಿಯಾಗಿ ಋತುಪರ್ಣನು ಎಂದಂತೆ ಇತ್ತು. ನಳನ ಆಶ್ಚರ್ಯ ಹೇಳತೀರದು. ಮಹಾರಾಜ, ಯಾವ ವಿದ್ಯೆಯಿಂದ ನೀವು ಇದನ್ನು ಹೇಳಬಲ್ಲವರಾದಿರೋ ಅದನ್ನು ಕೇಳಿ ತಿಳಿಯಬೇಕೆಂಬ ಇಚ್ಛೆ ಉಂಟಾಗಿದೆ. ಅದನ್ನು ನನಗೆ ಅನುಗ್ರಹಿಸಬೇಕು.

ಋತುಪರ್ಣ — ಸಂಖ್ಯಾಶಾಸ್ತ್ರದಂತೆಯೇ ನನಗೆ ಅಕ್ಷಹೃದಯವೂ ತಿಳಿದಿದೆ.

ಬಾಹುಕ — ಆ ಎರಡು ವಿದ್ಯೆಗಳನ್ನೂ ನನಗೆ ತಾವು ಹೇಳಿಕೊಡಬೇಕು. ನಾನು ತಮಗೆ ಅಶ್ವಹೃದಯವನ್ನು ಕಲಿಸುತ್ತೇನೆ.

ಈ ಮಾತಿನ ಒಪ್ಪಂದದಂತೆ ಋತುಪರ್ಣನು ನಳನಿಗೆ ಅಕ್ಷವಿದ್ಯೆಯ ಮಹಾರಹಸ್ಯವನ್ನು ಪೂರ್ತಿಯಾಗಿ ತಿಳಿಸಿಕೊಟ್ಟನು. ನಳನು ಅವನಿಗೆ

ಅಶ್ವರಹಸ್ಯವನ್ನು ತಿಳಿಸುವೆನೆಂದಾಗ ಋತುಪರ್ಣನು ಅದನ್ನು ಆಮೇಲೆ ಆತನಿಂದ ಕಲಿತುಕೊಳ್ಳುವೆನೆಂದು ಹೇಳಿದನು. ನಳನಿಗೆ ಯಾವಾಗ ಅಕ್ಷ ಹೃದಯ ಗೊತ್ತಾಯಿತೋ ಈವರೆಗೂ ಅವನಲ್ಲಿ ಅಡಗಿದ್ದ ಕಲಿ ಅವನೊಳ .ಿಂದ ಹೊರಬಿದ್ದನು. ಅಲ್ಲಿ ಅವನಿಗೆ ಇನ್ನು ಸ್ಥಳವಿಲ್ಲ. ಕರ್ಕೋಟಕನ ವಿಷವನ್ನೆಲ್ಲ ಕಾರಿಯಾಯಿತು. ಕಲಿಯನ್ನು ನೋಡಿ ಕೋಪಗೊಂಡ ನಳನು ಅವನಿಗೆ ಶಾಪ ಕೊಡಬೇಕೆಂದು ನಿರ್ಣಯಿಸುವುದರೊಳಗಾಗಿ ಕಲಿ ನಳನಿಗೆ ಶರಣಾಗತನಾದನು. ದಮಯಂತಿಯ ಶಾಪದಿಂದಲೂ ಕರ್ಕೋಟಕನ ಶಾಪದಿಂದಲೂ ಒಳಗೇ ತಾನು ಪಟ್ಟ ಕಷ್ಟವನ್ನು ಹೇಳಿಕೊಂಡು ಅವನ ಕ್ಷಮೆ ಬೇಡಿ ಅಲ್ಲಿಂದ ಹೊರಟುಹೋದನು. ನಳನಿಗೆ ಹೊಸ ತೇಜಸ್ಸು ಬಂದಿತು. ಮೈ ಹಗುರವಾಗಿ ಕಷ್ಟವೆಲ್ಲ ಪರಿಹಾರವಾದರೂ ರೂಪವಿಕಾರ ಮಾತ್ರ ಹಾಗೆಯೇ ಉಳಿಯಿತು.

ರಥವನ್ನು ಇಬ್ಬರೂ ಏರಿದರು. ಪುನಃ ಕುದುರೆಗಳು ವೇಗದಿಂದ ಓಡಿದವು. ಸಂಜೆಗೇ ಇವರು ಕುಂಡಿನಪುರವನ್ನು ಮುಟ್ಟಿದರು.

ಋತುಪರ್ಣನು ರಥದಲ್ಲಿ ತಮ್ಮ ಪಟ್ಟಣಕ್ಕೆ ಬಂದನೆಂದು ರಾಜ ಭೀಮನಿಗೆ ಜನರು ವರದಿ ಒಪ್ಪಿಸಿದರು. ನಳನು ನಡಸುವ ರಥದ ಘೋಷ ದಮಯಂತಿಯ ಕಿವಿಗೆ ವರ್ಷಾಗಮದಲ್ಲಿ ಕೇಳುವ ಮುಗಿಲನಾದ ದಂತೆ ಗಂಭೀರವಾಗಿ ಕೇಳಿಸಿತು. ಅದನ್ನು ಕೇಳಿ ಪ್ರಾಸಾದಗಳಲ್ಲಿ ನವಿಲುಗಳೂ, ಗಜಶಾಲೆಯಲ್ಲಿ ಆನೆಗಳೂ, ಅಶ್ವಶಾಲೆಗಳಲ್ಲಿ ಕುದುರೆಗಳೂ ಹರ್ಷಧ್ವನಿ ಮಾಡಿದವು. ತನ್ನ ಪ್ರಿಯನಾದ ನಳನು ಬಾರದಿದ್ದರೆ ತಾನ ಬದುಕುವುದು ಶಕ್ಯವಿಲ್ಲವೆಂದು ಆಕೆಗೆ ನಿಶ್ಚಯವಾಯಿತು. ಆತನ ಗುಣಗಳನ್ನು ಸ್ಮರಿಸುತ್ತ ಇರುಳೂ ಹಗಲೂ ಅಗಲಿಕೆಯ ವೇದನೆಯಿಂದ ನನ ಹೃದಯ ಸೀಳಿಹೋಗುತ್ತಿದೆ ಎಂದು ಶೋಕಿಸುತ್ತ ಮಹಮನೆಯ ಉಪ್ಪರಿಗೆಯ ಮೇಲಕ್ಕೆ ಹೋದಳು. ಆ ಪುಣ್ಯಶ್ಲೋಕನ ದರ್ಶನ ಸಿಕ್ಕೀತೆಂದು ಆಸೆಪಟ್ಟಳು. ನಡುವಿನ ಉಪ್ಪರಿಗೆಯ ಕಕ್ಷ್ಯಗಳಿಂದ ರಥ ಬಂದುದು ಕಾಣಿಸಿತು. ನಳನ ದರ್ಶನವಾಗಲಿಲ್ಲ.

ಬಾಹುಕ ವಾರ್ಷ್ಣೇಯರೊಡನೆ ಋತುಪರ್ಣ ಮಹಾರಾಜನು ರಥದಿಂದ ಇಳಿದನು. ಎತ್ತ ನೋಡಿದರೂ ಆ ಊರಲ್ಲಿ ಯಾವ ವಿಶೇಷವೂ ಕಾಣದು. ಉತ್ಸವವಿಲ್ಲ; ಸಂಭ್ರಮವಿಲ್ಲ. ಇದೆಲ್ಲ ಅವನಿಗೆ ವಿಚಿತ್ರವಾಗಿ ತೋರಿತು. ಭೀಮಮಹಾರಾಜನನ್ನು ಕಂಡದ್ದೂ ಆಯಿತು. ಭೀಮನಿಗೂ ಈತನು ಈಗ ಅಷ್ಟು ದೂರದಿಂದ ಯಾವ ಗೊತ್ತಾದ ಕಾರ್ಯವೂ ಇಲ್ಲದೆ ಬಂದದ್ದನ್ನು ನೋಡಿ ಆಶ್ಚರ್ಯವಾಯಿತು. ಮನೆಯ ಹೆಂಗಸರು ಮಾಡಿದ್ದ ಯೋಜನೆ ಆತನಿಗೇನು ಗೊತ್ತು? ಕುಶಲಪ್ರಶ್ನೆಗಳಾದಮೇಲೆ ಅತಿಥಿಯು ತನಗಾಗಿ ಏರ್ಪಡಿಸಿದ್ದ ಬೀಡಾರಕ್ಕೆ ಹೋದನು. ಬಾಹುಕನು ರಥಶಾಲೆಗೆ ಹೋಗಿ ಕುದುರೆಗಳನ್ನು ಬಿಚ್ಚಿ ಅವಕ್ಕೆ ಉಪಚಾರ ಮಾಡಿದನು. ತಾನು ರಥದಲ್ಲಿಯೇ ಕುಳಿತನು.

ಅರಮನೆಯಲ್ಲಿ ಒಳಗೆ ದಮಯಂತಿಯ ಮನಸ್ಸಿನಲ್ಲಿ ಈಗ ಬಗೆಬಗೆಯ ಯೋಚನೆ. ಹೀಗೆ ಘೋಷ ಮಾಡಿದ ರಥ ಯಾವುದು? ನಳನ ರಥದ ಧ್ವನಿಯಂತೆಯೇ ಶಬ್ದ ಗಂಭೀರವಾಗಿದೆ. ಆದರೆ ನಿಷಧ ರಾಜನಾದ ನಳನೆಲ್ಲಿಯೂ ಕಾಣನು. ತನ್ನ ಒಡೆಯನಿಂದ ವಾರ್ಷ್ಣೇಯನು ಎಲ್ಲಿಯೋ ಅಶ್ವವಿದ್ಯೆಯನ್ನು ಕಲಿತಿರಬೇಕಷ್ಟೇ, ಎಂದು ತರ್ಕಮಾಡಿಕೊಳ್ಳುತ್ತಿದ್ದಳು. ಇನ್ನೂ ಏನೇನನ್ನೋ ಯೋಚಿಸಿ ಕಡೆಗೆ ಒಂದು ತೀರ್ಮಾನಕ್ಕೆ ಬಂದು ದೂತಿಯೊಬ್ಬಳನ್ನು ಕರೆದಳು. ನಳನನ್ನು ಹುಡುಕಲು ಆಕೆಗೆ ತಕ್ಕ ಉಪದೇಶ ಮಾಡಿದಳು.

"ಕೇಶಿನಿ, ಹೋಗು, ವಿಕಾರಿಯಾದ ಈ ಸಾರಥಿ ಯಾವನೋ ನೋಡಿ ಬಾ. ಅವನ ಕೈಗಳು ಮೊಂಡಂತೆ. ರಥದೊಳಗೇ ಇರುವನಂತೆ. ಅವನೇ ನಳನಿರಬೇಕೆಂದು ನನಗೆ ಶಂಕೆಯಾಗಿದೆ. ಅವನೊಡನೆ ಮೃದುವಾಗಿ ಮಾತಾಡು. ಕಡೆಗೆ ಪರ್ಣಾದನು ಆಡಿದ ಮಾತುಗಳನ್ನು ಹೇಳು. ನೀನು ಶುಚಿಶೀಲೆ. ಆತನು ಏನು ಹೇಳುವನೋ ಕೇಳಿ, ಆತನ ಉತ್ತರವನ್ನು ನನಗೆ ತಂದು ಹೇಳು."

ಬಾಹುಕನಲ್ಲಿಗೆ ಕೇಶಿನಿ ಹೋಗಿ, "ಮನುಜೇಂದ್ರ, ನಿಮಗೆ ಸ್ವಾಗತ. ನಿಮಗೆ ಎಲ್ಲಾ ಒಳ್ಳೆಯದಾಗಲಿ. ನೀವು ಪ್ರಯಾಣ ಹೊರಟದ್ದು

ಯಾವಾಗ? ಇಲ್ಲಿಗೇತಕ್ಕೆ ಬಂದಿರಿ? ನಿಜವಾಗಿ ಹೇಳಬೇಕು. ರಾಜಕುಮಾರಿ ಇದನ್ನು ಕೇಳಬೇಕೆಂದು ಇಷ್ಟಪಡುತ್ತಾಳೆ" ಎಂದಳು.

ಬಾಹುಕ—ನಮ್ಮಲ್ಲಿಗೆ ಯಾರೋ ಬ್ರಾಹ್ಮಣ ಒಬ್ಬನು ಬಂದನು. ಕೋಸಲದ ಮಹಾರಾಜನಾದ ಮಹಾತ್ಮನಾದ ಋತುಪರ್ಣನಿಗೆ ಈ ವೃತ್ತಾಂತವನ್ನು ತಿಳಿಸಿದನು: ನಾಳೆಯೇ ದಮಯಂತಿಗೆ ಎರಡನೆಯ ಸ್ವಯಂವರ ಏರ್ಪಟ್ಟಿದೆ, ನಿಮಗೆ ಇಷ್ಟವಾದರೆ ನೀವೂ ಬೇಗ ಹೋಗಿ ಎಂದನು. ಇದನ್ನು ಕೇಳಿದ ಕೂಡಲೆ ನಮ್ಮ ರಾಜನು ಈ ರಥವನ್ನು ಏರಿದನು. ಈ ಕುದುರೆಗಳ ಗತಿ ಬಹು ವೇಗವಾದ್ದು. ಗಾಳಿಯಂತೆ ಓಡಬಲ್ಲವು ಇವು. ನೂರು ಯೋಜನ ಇದರಲ್ಲಿ ಬಂದೆವು. ನಾನು ರಾಜನ ಸಾರಥಿ ಬಾಹುಕ. ಕುದುರೆಗಳನ್ನು ನಡಸುವುದರಲ್ಲಿ ನನಗೆ ಪ್ರಾವೀಣ್ಯವಿರುವುದರಿಂದ ಆತನು ನನ್ನನ್ನು ಈ ಕೆಲಸಕ್ಕಿಟ್ಟುಕೊಂಡಿದ್ದಾನೆ. ನನಗೆ ಅಡಿಗೆಯ ಕೆಲಸವೂ ಬರುವುದರಿಂದ ತನ್ನ ಭೋಜನವನ್ನು ಮಾಡಿ ಬಡಿಸುವುದಕ್ಕೂ ನನ್ನನ್ನೇ ನಿಯಮಿಸಿಕೊಂಡಿದ್ದಾನೆ.

ಕೇಶಿನಿ-ಆ ಬ್ರಾಹ್ಮಣನು ಮೊದಲು ಇಲ್ಲಿಂದ ಅಯೋಧ್ಯೆಗೆ ಹೋದಾಗ ಏನೋ ಮಾತುಗಳನ್ನು ಆಡಿದನಂತೆ. ಮಾತುಗಳು ಒಬ್ಬ ಹೆಂಗಸಿನವಂತೆ. ಅವನ್ನು ಕೇಳಿದ ಕೂಡಲೆ ನೀವು ಉತ್ತರ ಕೊಟ್ಟಿರಂತೆ. ನಿಜವೆ? ಆ ಉತ್ತರವನ್ನು ಪುನಃ ಕೇಳಬೇಕೆಂದು ರಾಜಕುಮಾರಿ ಇಷ್ಟಪಡುತ್ತಾಳೆ.

ಕೇಶಿನಿಯ ಈ ಮಾತನ್ನು ಕೇಳಿ ಬಾಹುಕನ ಹೃದಯದಲ್ಲಿ ವ್ಯಥೆ ಉಂಟಾಯಿತು. ಕಣ್ಣಲ್ಲಿ ನೀರು ತುಂಬಿತು. ತನ್ನ ದುಃಖವನ್ನು ತಡೆದು ಕೊಂಡು ಮೊದಲು ತಾನು ಆಡಿದ್ದ ಮಾತುಗಳನ್ನು ಅವಳಿಗೆ ಹೇಳಿದನು. ಆ ಉತ್ತರವನ್ನು ಕೊಂಡುಹೋಗಿ ಕೇಶಿನಿ ದಮಯಂತಿಗೆ ತಿಳಿಸಿದಳು. ನಡೆದುದನ್ನೆಲ್ಲ ವಿವರಿಸಿದಳು. ಆತನ ದೇಹವಿಕಾರವನ್ನೂ ತಿಳಿಸಿದಳು.

"ಕೇಶಿನಿ, ಆತನ ಬಳಿಗೆ ಪುನಃ ಹೋಗು; ಸೂಕ್ಷ್ಮವಾಗಿ, ವಿವರವಾಗಿ, ಆತನನ್ನು ಪರೀಕ್ಷೆಮಾಡು. ಆತನ ಬಳಿ ಮೌನದಿಂದಿರು. ಆತನ ಇತರ ನಡತೆಯನ್ನೂ, ಲಕ್ಷಣಗಳನ್ನೂ, ಆತನು ಮಾಡುವ ಕೆಲಸ ಗಳಲ್ಲಿ ಕಾಣಬರುವ ಚಾತುರ್ಯವನ್ನೂ ನೋಡಿ ಬಾ" – ಎಂದು ಹೇಳಿದಳು.

ಒಡತಿಯ ಆಜ್ಞೆಯನ್ನು ತಪ್ಪದೆ ನಡಸಿಕೊಂಡು ಕೇಶಿನಿ ಹಿಂತಿರುಗಿದಳು.

"ನಿಜವಾಗಿ ತಾಯಿ, ಆತನ ಯೋಗ್ಯತೆ ಅದ್ಭುತವಾದದ್ದು. ಅಂಥ ಇನ್ನೊಬ್ಬರನ್ನು ಹಿಂದೆ ಎಲ್ಲಿಯೂ ನೋಡಿಲ್ಲ; ಕೇಳಿಲ್ಲ. ಬಾಗಿಲು ತಗ್ಗಾದರೂ ತಲೆಯನ್ನು ಬಾಗಿಸನು. ಇಕ್ಕಟ್ಟಾದ ದಾರಿ ಆತನು ನಡೆವಾಗ ವಿಸ್ತಾರವಾಗುತ್ತದೆ; ದೊಡ್ಡದಾಗುತ್ತದೆ. ಋತುಪರ್ಣನ ಭೋಜನಕ್ಕಾಗಿ ಆಹಾರ ಪದಾರ್ಥಗಳು ಅವನಲ್ಲಿಗೆ ಹೋಗುವುವು. ಅನೇಕ ಪ್ರಾಣಿಗಳ ಮಾಂಸ ಬೇಕಾದಷ್ಟು ಹೋಗುವುದು. ಅವನ್ನು ತೊಳೆಯಲು ಹಲವು ನೀರ ಕೊಡಗಳನ್ನು ಅಲ್ಲಿ ಇಟ್ಟಿರುವರು. ಆತನ ನೋಟ ಬಿದ್ದ ಕೂಡಲೆ ಕೊಡ ತುಂಬುವುವು. ಒಂದು ಸಲ ಒಂದು ಹಿಡಿ ಹುಲ್ಲನ್ನು ತಂದು ಬಿಸಿಲಿಗೆ ತೋರಿಸಿದ. ಅದು ಭಗ್ಗನೆ ಹತ್ತಿಕೊಂಡು ಉರಿಯಿತು. ಆಶ್ಚರ್ಯವಮ್ಮ. ಬೆಂಕಿಯನ್ನು ಬೇಕಾದ ಹಾಗೆ ಮುಟ್ಟುತ್ತಾನೆ; ಆತನ ಕೈ ಸುಡುವಂತೆ ಕಾಣುವುದಿಲ್ಲ. ಹೂಗಳನ್ನು ಕೈಯಲ್ಲಿ ಹಿಡಿದು ಹೊಸಕಿದರೆ ಅವು ಹೊಸವಾಗಿಯೇ ಇರುತ್ತವೆ; ಅವುಗಳ ಪರಿಮಳ ಕುಂದದು. ಬಾಹುಕನಿರುವ ಕಡೆ ಈ ಅದ್ಭುತಗಳಾಗುತ್ತಿವೆ" ಎಂದು ಕೇಶಿನಿ ನುಡಿದಳು. ಆತನು ಮಾಡಿದ್ದ ಅಡಿಗೆಯನ್ನು ಯಾರೂ ಅರಿಯದಂತೆ ತರಿಸಿ ಅದರ ರುಚಿ ನೋಡಿದಳು. ಅದು ನಳನ ಪಾಕವೆಂದೇ ತನ್ನ ಅನುಭವದಿಂದ ತಿಳಿದಳು. ಸುರಿಯುವ ಕಣ್ಣೀರನ್ನು ತೊಡೆದು, ಮುಖವನ್ನು ತೊಳೆದುಕೊಂಡಳು. ಬಾಹುಕನ ವೇಷದಲ್ಲಿರುವವನು ತನ್ನ ಗಂಡ ನಳನೇ ಸರಿ ಎಂಬ ಆಕೆಯ ಸಂದೇಹ ದೃಢವಾಯಿತು. ಈ ಸಲ ಬಾಹುಕನ ಬಳಿಗೆ ಹೋಗುವ ಕೇಶಿನಿಯೊಡನೆ ತನ್ನ ಮಕ್ಕಳಾದ ಇಂದ್ರಸೇನ ಇಂದ್ರಸೇನೆಯರನ್ನು ಕಳಿಸಿಕೊಟ್ಟಳು.

ಮಕ್ಕಳಿಬ್ಬರನ್ನೂ ನಳನು ಗುರುತಿಸಿದನು. ' ಆತನನ್ನು ದುಃಖ ಆವರಿಸಿತು. ಅವರನ್ನು ಕಂಡ ಕೂಡಲೆ ಓಡಿಬಂದು ಅಪ್ಪಿಕೊಂಡನು.

"ಈ ಅವಳಿಮಕ್ಕಳು ನನ್ನ ಇಬ್ಬರು ಅವಳಿಮಕ್ಕಳನ್ನು ನೆನಪಿಗೆ ತಂದರು. ಆದ್ದರಿಂದ ಅವರನ್ನು ಕಂಡಕೂಡಲೆ ಕಣ್ಣಲ್ಲಿ ನೀರು ಬಂತು.

ನನ್ನದೊಂದು ಪ್ರಾರ್ಥನೆಯನ್ನು ಕೇಳಿ ನೀನು ನಡಸಿಕೊಡು ತಾಯಿ : ನೀನು ಹಲವು ಸಲ ಇಲ್ಲಿಗೆ ಬರುವುದು ಸರಿಯಲ್ಲ. ಬೇಡ. ಇಂಥ ನಿನ್ನನ್ನು ಕಂಡ ಜನ ನಿನ್ನ ನಡತೆಯ ಮೇಲೆ ದೋಷ ಹೊರಿಸಿಯಾರು. ಶಂಕೆ ಮಾಡಿಯಾರು. ನಾವು ಬೇರೆದೇಶದಿಂದ ಬಂದಿರುವ ಅತಿಥಿಗಳು. ನಿನಗೆ ಸುಖವಾಗುವ ರೀತಿ ಇಲ್ಲಿಂದ ಹೋಗು, – ನಿನಗೆ ನಮಸ್ಕಾರ " ಎಂದನು.

ಕೇಶಿನಿ ಹೊರಟಳು. ನಡೆದುದನ್ನು ದಮಯಂತಿಗೆ ನಿವೇದಿಸಿದಳು. ಯಾವ ಸಂದೇಹಕ್ಕೂ ಇನ್ನು ಅವಕಾಶವಿರಲಿಲ್ಲ. ತಂದೆ ತಾಯಿಯರ ಅಪ್ಪಣೆಯನ್ನು ಪಡೆದು ದಮಯಂತಿ ಬಾಹುಕನನ್ನು ತನ್ನ ಒಳಮನೆಗೆ ಕರಸಿಕೊಂಡಳು. ನಳನು ಬಂದನು. ದಮಯಂತಿ ಉಟ್ಟಿದ್ದ ಬಟ್ಟೆ ಮಲಿನ ವಾಗಿತ್ತು ; ಜಡೆ ತಿರಿಕಟ್ಟಿತ್ತು ; ಮೈ ದೂಳು ಕವಿದಿತ್ತು. ತೀವ್ರ ಶೋಕದಿಂದ ಆಕೆ ನಳನಿಗೆ ಪ್ರಶ್ನೆಹಾಕಿದಳು :

" ಹಿಂದೆ ಸಾಕ್ಷಾತ್ ದೇವತೆಗಳನ್ನೂ ದೂರಮಾಡಿ ಬಯಸಿ ಆರಿಸಿ ಕೊಂಡ ಗಂಡನು ಅಂಥ ಹೆಂಡತಿಯನ್ನು, ಅನುವ್ರತಳನ್ನು, ಅಭಿಮತೆಯನ್ನು, ಗಂಡುಮಗನನ್ನು ಹೆತ್ತ ಮಡದಿಯನ್ನು ಕಾಡಿನಲ್ಲಿ ಬಿಟ್ಟು ಹೋಗಬಹುದೆ? ಆತನಲ್ಲಿ ಅವಳು ಯಾವ ಅಪರಾಧವನ್ನು ಮಾಡಿದ್ದಳು ? ಅವಳನ್ನು ಕಾಪಾಡುವೆನೆಂದು ಅಗ್ನಿಸಾಕ್ಷಿಯಾಗಿ ಮಾತುಕೊಟ್ಟಿರಲಿಲ್ಲವೆ ?"

ನಳ — ನಿನ್ನನ್ನು ಬಿಟ್ಟು ಆ ಕಾರ್ಯಗಳನ್ನು ಮಾಡಿದ್ದು ನಾನಲ್ಲ ; ಕಲಿದೇವನು. ನನ್ನ ಶರೀರದಲ್ಲಿ ವಾಸಮಾಡುತ್ತಿದ್ದ ಆ ಕಲಿ ನಿನ್ನ ಶಾಪದಿಂದ ಈಗ ಸುಟ್ಟುಹೋಗಿದ್ದಾನೆ. ನಾನೂ ಅದಕ್ಕಾಗಿ ತುಂಬಾ ವ್ಯವಸಾಯ ಮಾಡಿದ್ದೇನೆ, ತಪಿಸಿದ್ದೇನೆಯಾಗಿ ಅವನನ್ನು ಪೂರ್ತಿ ಸೋಲಿಸ ಲಾಯಿತು. ಆ ಪಾಪಿ ನನ್ನನ್ನು ಬಿಟ್ಟುಹೋದನು. ಆದ್ದರಿಂದಲೇ ನಾನು ಇಲ್ಲಿಗೆ ಬಂದುದು. ಆದರೆ ತನ್ನಲ್ಲಿ ಅನುರಕ್ತನಾದ ಪತಿಯನ್ನು ಬಿಟ್ಟು ಕುಲೀನಳಾದ ಯಾವ ನಾರಿ ಸ್ವೈರವೃತ್ತಿಯಿಂದ ನಿನ್ನಂತೆ ಇನ್ನೊಬ್ಬ ನನ್ನು ವರಿಸುತ್ತೇನೆಂದು ಸಾರಿಸುತ್ತಾಳೆ ? ಇದು ಸರಿಯೊ ? ಭೀಮರಾಜನ ಮಗಳು ಎರಡನೆಯ ಗಂಡನನ್ನು ವರಿಸುತ್ತಾಳೆಂದು ಕೇಳಿ ಋತುಪರ್ಣನು ಇಲ್ಲಿಗೆ ತ್ವರೆಯಿಂದ ಬಂದಿದ್ದಾನೆ ' ಎಂದನು. ದಮಯಂತಿ ಇದನ್ನು ಕೇಳಿ

ನಡುಗಿದಳು. ಆಕೆಗೆ ಭಯವಾಯಿತು. ನಳನಿಗೆ ಕೈ ಮುಗಿದುಕೊಂಡು ಹೇಳಿದಳು :- "ನಿಮ್ಮನ್ನು ಇಲ್ಲಿಗೆ ಬರಮಾಡುವುದಕ್ಕಾಗಿ ನಾನು ಈ ಉಪಾಯವನ್ನು ಹೂಡಿದೆನೇ ಹೊರತು ಬೇರೆಯಲ್ಲ. ನಿಮ್ಮ ಕಾಲು ಮುಟ್ಟಿ ಪ್ರಮಾಣಮಾಡಿ ಹೇಳುತ್ತೇನೆ. ನಾನಾಡುವುದು ನಿಜ. ಮನಸ್ಸಿನಲ್ಲಿಯಾಗಲಿ ಕಾರ್ಯದಲ್ಲಿಯಾಗಲಿ ನಾನು ದುಷ್ಕಾರ್ಯವನ್ನು ಮಾಡಿದ್ದ ಪಕ್ಷದಲ್ಲಿ ನನ್ನ ಪ್ರಾಣ ಹೋಗಲಿ. ಸೂರ್ಯ, ಚಂದ್ರ, ವಾಯು ದೇವರುಗಳೇ ಇದಕ್ಕೆ ಸಾಕ್ಷಿ." - ಆಕೆ ಮಾತನಾಡುತ್ತಿದ್ದ ಹಾಗೆಯೇ ಅಂತರಿಕ್ಷದಿಂದ 'ದಮಯಂತಿ ಆಡುತ್ತಿರುವುದು ನಿಜ ; ಆಕೆಯನ್ನು ನಂಬು. ಆಕೆ ಯಾವ ಪಾಪವನ್ನೂ ಮಾಡಿದವಳಲ್ಲ' ಎನ್ನುತ್ತಿರುವ ವಾಯುದೇವನ ಮಾತು ಕೇಳಿಸಿತು. ಅದೇ ಕ್ಷಣ ಆಕಾಶದಿಂದ ಹೂಮಳೆ ಕರೆಯಿತು.

ನಳನು ದಿವ್ಯ ವಸ್ತ್ರವನ್ನು ಹೊದ್ದು ಸರ್ಪರಾಜನನ್ನು ಸ್ಮರಿಸಿಕೊಂಡನು. ಕೂಡಲೆ ಆತನ ದಿವ್ಯಾಕಾರ ಆತನಿಗೆ ಮರಳಿ ಬಂತು. ನಾಲ್ಕು ವರ್ಷಗಳ ತರುವಾಯ ಗಂಡ ಹೆಂಡಿರು ಪುನಃ ಒಬ್ಬರನ್ನೊಬ್ಬರು ಪಡೆದ ಸಂತೋಷದಲ್ಲಿ ಈವರೆಗೆ ಉಂಟಾಗಿದ್ದ ದುಃಖವನ್ನು ಮರೆತರು. ಗಂಡನು ಸಿಕ್ಕಿದುದರಿಂದ ಆಪ್ಯಾಯಿತಳಾದ ದಮಯಂತಿಗೆ, ಅರ್ಧ ಬೆಳೆದ ಪಯಿರಿಗೆ ಮಳೆ ಬಂದರೆ ಭೂಮಿಗೆ ಎಷ್ಟು ಸೊಂಪಾಗುವುದೋ ಅಷ್ಟು ಸಂತುಷ್ಟಿಯಾಯಿತು. ಈ ಸಂಗತಿ ಊರಿಗೆಲ್ಲ ಹರಡಿತು. ಋತುಪರ್ಣನಿಗೂ ತಿಳಿಯಿತು. ತನ್ನ ಊಳಿಗದಲ್ಲಿದ್ದವನು ನಳನೆಂದು ಕೇಳಿ ಆತನ ಬಳಿಗೆ ಬಂದು ಕ್ಷಮಾಪಣೆ ಬೇಡಿದನು. ಹೆಂಡತಿ ಮಕ್ಕಳೊಡನೆ ನಳ ಮಹಾರಾಜನು ಸೇರಿಕೊಳ್ಳಲಾದ ಭಾಗ್ಯಕ್ಕಾಗಿ ತನ್ನ ಸಂತೋಷವನ್ನು ತಿಳಿಸಿದನು. ಇಬ್ಬರೂ ಪರಸ್ಪರ ಉಪಕಾರಗಳನ್ನು ಸ್ಮರಿಸಿಕೊಂಡರು. ನಳನು ಋತುಪರ್ಣನಿಗೆ ಹಯಜ್ಞಾನವನ್ನು ಉಪದೇಶಮಾಡಿ ಕಳಿಸಿಕೊಟ್ಟನು. ಋತುಪರ್ಣನು ಇವರಿಗೆ ಶುಭವನ್ನು ಬಯಸಿ ಅಪ್ಪಣೆ ಪಡೆದು ತನ್ನ ರಾಜ್ಯಕ್ಕೆ ಹಿಂತಿರುಗಿದನು.

ಒಂದು ತಿಂಗಳು ಇಲ್ಲಿಯೇ ಇದ್ದು ನಳನು ಪುಷ್ಕರನಾಳುತ್ತಿದ್ದ ತನ್ನೂರಿಗೆ ಹೋಗಿ ಅವನೊಡನೆ ಪುನಃ ಪಗಡೆಯಾಟವಾಡಿದನು.

ತನ್ನ ಸಮಸ್ತವನ್ನೂ ದಮಯಂತಿಯನ್ನೂ ಪ್ರಾಣವನ್ನೂ ನಳನು ಪಣವಾಗಿಟ್ಟನು. ಈ ಸಲ ಗೆದ್ದವನು ನಳ, ಸೋತವನು ಪುಷ್ಕರ. ತಮ್ಮನ ಪ್ರಾಣವು ನಳನಿಗೆ ಅಧೀನವಾಗಿದ್ದರೂ ಅವನು ಆಡಿದ್ದ ಮಾತುಗಳು ಅನಾರ್ಯವಾಗಿದ್ದರೂ ಪುಷ್ಕರನ ಮೇಲೆ ನಳನಿಗೆ ಯಾವ ಕೋಪವೂ ಕ್ರೋಧವೂ ಇರಲಿಲ್ಲ. ಸೋತು ತಲೆಬಗ್ಗಿಸಿದ್ದ ತಮ್ಮನಿಗೆ ಪ್ರೀತಿಯ ಮಾತನ್ನಾಡಿದನು. 'ಆಗ ಗೆದ್ದವನು ನೀನಲ್ಲ; ಅದು ಕಲಿಯ ಏರ್ಪಾಡು. ತಪ್ಪು ನಿನ್ನದಲ್ಲ; ನನ್ನನ್ನು ಹೊಕ್ಕಿದ್ದ ಕಲಿಯದು' ಎಂದು ತಮ್ಮನಿಗೆ ಒಂದೆರಡು ಉಪಚಾರದ ಮಾತುಗಳನ್ನಾಡಿ, ಬುದ್ಧಿ ಹೇಳಿ, ಅವನ ಸಂಪತ್ತನ್ನೂ ರಾಜ್ಯಭಾಗವನ್ನೂ ಅವನಿಗೆ ಕೊಟ್ಟು ನೂರು ವರ್ಷ ಬದುಕು ಹೋಗೆಂದು ಅವನೂರಿಗೆ ಕಳಿಸಿಕೊಟ್ಟನು.

ಆ ಮೇಲೆ ಬೇಕಾದಷ್ಟು ವೈಭವದಿಂದ ದಮಯಂತಿಯನ್ನೂ ಮಕ್ಕಳನ್ನೂ ನಳನು ತನ್ನ ಪಟ್ಟಣಕ್ಕೆ ಬರಮಾಡಿಕೊಂಡು ಬಹುಕಾಲ ಸುಖವಾಗಿ ಬಾಳಿದನು.

## ೮

ನಮ್ಮ ದೇಶದ ಹೆಣ್ಣುಮಕ್ಕಳನ್ನು ಹರಸುವಾಗ ಸೀತೆಯಂತಿರು' ಸಾವಿತ್ರಿಯಂತಾಗು, ದಮಯಂತಿಯಂತೆ ಬದುಕು ಎನ್ನುವುದುಂಟು. ನಯದಲ್ಲಿ, ನಡತೆಯಲ್ಲಿ ಆ ಮಹಿಳೆಯರು ಅಷ್ಟು ಹೆಸರಾದವರು. ಎಲ್ಲ ಕಾಲದವರೂ ಅವರ ಕಥೆಯನ್ನು ಕೇಳಿ ಮೆಚ್ಚಿಕೊಂಡಿದ್ದಾರೆ. ಎಲ್ಲ ದೇಶದವರಿಗೂ ಮೆಚ್ಚಿಕೆ ಆಗಿದೆ. ಗಂಡಹೆಂಡಿರಲ್ಲಿ ಒಬ್ಬರಲ್ಲೊಬ್ಬರಿಗೆ ಇಲ್ಲಿನಂತೆ ಗೌರವ ಹುಟ್ಟದಿದ್ದರೆ ಅವರ ಪ್ರೇಮ ದೊಡ್ಡದಾಗುವುದಿಲ್ಲ.

ದಮಯಂತಿ ನಳನಿಗೆ ಒಲಿದು ದೇವತೆಗಳನ್ನು ಕೂಡ ಒಲ್ಲದೆ ಒಂದೇ ಮನಸ್ಸಿನಲ್ಲಿ ಆತನನ್ನು ವರಿಸಿದಳು. ಪಗಡೆ ಆಡಿ ಸೋಲುತ್ತಿದ್ದಾಗ ಆತನನ್ನು ಬಿಟ್ಟು ತನ್ನ ತಾಯಮನೆಗೆ ಹೋಗಲಿಲ್ಲ. ಆ ಸಮಯದಲ್ಲಿ ಆಕ್ಷೇಪಣೆಮಾಡಿ ಗಂಡನ ಅಭಿಮಾನವನ್ನು ಕೆಡಿಸಲಿಲ್ಲ. ಮಕ್ಕಳನ್ನು ತನ್ನ ತವರಿಗೆ ಕಳಿಸಿ ತಾನು ಅವನ ಜೊತೆಗೇ ನಿಂತಳು. ಕಾಡಿನಲ್ಲಿ ಆತನು

ಬಗೆಬಗೆಯಾಗಿ ತಿಳಿಯಹೇಳಿದ; ಅವಳು ತವರ್ಮೂರಿಗೆ ಹೋಗಲಿಲ್ಲ. ಗಂಡನೊಡನೆಯೇ ಇರುವೆನೆಂದಳು; ಜೊತೆಯಲ್ಲಿದ್ದು ಅವನ ಕಷ್ಟದಲ್ಲಿ ಭಾಗವಹಿಸುವೆನೆಂದಳು. ನಡುರಾತ್ರಿ ನಿದ್ದೆ ಮಾಡುತ್ತಿದ್ದಾಗ ನಳನು ಅವಳನ್ನು ಬಿಟ್ಟುಹೋಗಲು, ತಬ್ಬಲಿಯಾಗಿ ಅಲೆದು ಯಾರದೋ ನೆರವಿಂದ ಉಳಿದುಕೊಂಡು ಯಾರಲ್ಲಿಯೋ ಊಳಿಗಕ್ಕೆ ಸೇರಿ ಕಾಲಹಾಕಿ, ಕಡೆಗೆ ತಂದೆಯ ಮನೆಯನ್ನು ಸೇರಿದಳು. ಆಕೆ ಆಮೇಲೆ ಮಾಡಿದುದು ಮಾತ್ರ ತುಂಬಾ ಧೈರ್ಯದ ಕೆಲಸ. ನಮ್ಮ ಹೆಂಗಸರ ವಿಷಯವಾಗಿ ಅಂಥ ದನ್ನು ನುಡಿಯಲು ಕೂಡ ಎದೆಬೇಕು: ಎರಡನೆಯ ಬಾರಿ ದಮಯಂತಿಯ ಸ್ವಯಂವರ ನಡೆಯುವುದೆಂದು ಸಾರಿಸಿದಳು! ತಂದೆ ರಾಜನಿಗೆ ತಿಳಿಸದೆ ನಡಸಿದುದು ಈ ಸ್ತ್ರೀಮಂತ್ರಣ. ಆವರೆಗೆ ಯಾರಾದರೂ ಕಂಡದ್ದುಂಟೆ? ಕೇಳಿದ್ದುಂಟೆ? ಇಂಥ ಮಾತನ್ನು ಆರ್ಯರ ಹೆಣ್ಣು ಆಡಬಹುದೆ ಎನ್ನುವಷ್ಟು ಹೊಸತು ಆ ಸಾಹಸ. ಹಾಗೆಯೇ ಆತನ ಗುರುತು ಗಟ್ಟಿ ಮಾಡು ವುದಕ್ಕೆ ಏನೇನು ತಂತ್ರ ಹೂಡಿದಳು! ಇನ್ನೊಂದು ದೇಶದ ಅರಸನಿಗೆ ಆಸೆ ಹುಟ್ಟಿಸಿ ತನ್ನೂರಿಗೆ ಕರಸಿಕೊಂಡಳು. ಅವನ ಆಸೆ ಭಂಗಮಾಡಿದಳು. ಪರೀಕ್ಷೆ ಗಳ ಫಲವಾಗಿ ಬಾಹುಕನೇ ನಳನೆಂದು ತನ್ನ ಮನಸ್ಸಿಗೆ ನಿಶ್ಚಯವಾದಾಗ ನಳನನ್ನು ತಾನಿರುವಲ್ಲಿಗೆ ಬರಮಾಡಿಕೊಂಡಳು. ತನ್ನೆದುರಿಗೆ ನಳನು ಬಂದಾಗ ಸರಿಯಲ್ಲದ ರೀತಿ ಏಕೆ ನಡೆದುಕೊಂಡದ್ದೆಂದು ನೇರವಾಗಿ ಪ್ರಶ್ನೆಕೇಳಿದಳು. ಪ್ರಶ್ನೆಯೇನೊ ನೆಚ್ಚಿದ್ದ ಹೆಂಡತಿ, ಅವನಿಗೆ ಮಗನನ್ನು ಹೆತ್ತ ತಾಯಿ ಕೇಳಬಹುದಾದ ಪ್ರಶ್ನೆಯೇ ಹೌದು. ಇಂಥವರನ್ನು ಕಂಡರೆ ಯಾರಿಗೆ ತಾನೆ ಗೌರವ ಹುಟ್ಟದು? ಗೌರವವಷ್ಟೇ ಅಲ್ಲ; ಭೀತಿ ಹುಟ್ಟು ವುದು. ಇಂಥ ಹೆಂಗಸರು ಅಬಲೆಯರಲ್ಲ, ಗುಬ್ಬಚ್ಚಿಗಳಲ್ಲ, ಮಾನಿನಿಯರು; ವೀರಮಾತೆಯರು.

ನಳನೋ, – ಅವನದು ಮೃದು ಮನಸ್ಸು. ಪಗಡೆ ಆಡಿ ಸೋತು ಕಾಡು ಕಾಡು ಅಲೆದು ಮೈಮೇಲೆ ಇದ್ದ ಒಂದು ಬಟ್ಟೆಯನ್ನೂ ಹಕ್ಕಿ ಎಳೆದುಕೊಂಡು ಹೋಗಲು ತನ್ನ ಸ್ಥಿತಿಗೆ ನಾಚಿಕೆಗೊಂಡನು. ಹೆಂಡತಿಗೇಕೆ ಈ ಕಷ್ಟ, ಅವಳೇಕೆ ಇದನ್ನೆಲ್ಲ ನೋಡಬೇಕು, ಅನುಭವಿಸ

ಬೇಕು ಎಂದು ಬಹುವಾಗಿ ಆಕೆಗೆ ಹೇಳಿನೋಡಿದ. ಎಚ್ಚರವಾಗಿದ್ದರೆ ಅವಳಂತೂ ತಂದೆಯ ಮನೆಗೆ ಹೋಗಲು ಒಪ್ಪುವುದಿಲ್ಲವೆಂದು ತೀರ್ಮಾನ ವಾದಾಗ ಆವಳಿಗೆ ಉಪಕಾರವಾಗಲೆಂದು ನಿದ್ರಿಸುವ ಅವಳನ್ನು ಬಿಟ್ಟು ಹೊರಟ. ಕಲಿಯ ಪ್ರಭಾವ ಅವನನ್ನು ದುಃಸ್ಥಿತಿಗೆ ತಂದಿದ್ದರೂ ಹೆಂಡತಿಯ ಪರವಾದ ಅವನ ದಯೆ ದಾಕ್ಷಿಣ್ಯ ಕಡಮೆಯಾಗಿರಲಿಲ್ಲ. ಆಮೇಲೆ ಬಹುವಾಗಿ ಸಿಟ್ಟುಸಿರಿಟ್ಟ; ಬೇಗೆಪಟ್ಟ; ಅತ್ತ; ಅದು ಅವಳಿಗಾಗಿ. ತನ್ನ ನಡತೆಗಾಗಿ ನಾಚಿಕೊಂಡ.

ಪುನಃ ದಮಯಂತಿಯ ಊರಿಗೆ ಬಾಹುಕನಾಗಿ ಹೋಗಿ, ರಾಜನಾದ ವನು, ಊರಿನ ಅಳಿಯನಾದವನು, ಕುದುರೆಯ ಆಳಿರುವ ಲಾಯದಲ್ಲಿ ಹೀನನಂತೆ ಇದ್ದ. ಆದರೆ ಶೆಟ್ಟಿಯಿದ್ದಲ್ಲಿ ಪಟ್ಟಣ ಎಂಬಂತೆ ಅವನಿದ್ದ ಮನೆ ಅರಮನೆಯಂತಾಯಿತು. ಅದು ಅವನ ಪ್ರಭಾವ. ಅವನು ಆಡಿದುದು ಆಣಿಮುತ್ತು; ಮುಟ್ಟಿದುದು ಬಂಗಾರ; ಮಾಡಿದುದು ಮರ್ಯಾದೆ. ತನ್ನನ್ನು ಮೇಲೆ ಮೇಲೆ ಬಂದು ಮಾತನಾಡಿಸಿ, ಸಲಿಗೆ ತೋರಿಸುವ ಹೆಂಗಸಿನೊಡನೆ ಅವನು ನಡೆದುಕೊಂಡ ರೀತಿ ಋಷಿಗೆ ಒಪ್ಪತಕ್ಕ ನಡತೆ. ತಾನು ಸ್ವತಂತ್ರ ನಲ್ಲ; ಇನ್ನೊಬ್ಬನ ಆಳು; ಆ ಊರಿಗೆ ಬಂದಿರುವ ಅತಿಥಿ. ಆ ಎಲ್ಲಕ್ಕೂ ತಕ್ಕಂತೆ ನಡೆದುಕೊಳ್ಳಬೇಕು. ಆಕೆ ಹೆಂಗಸು; ಅವನಿರುವಲ್ಲಿಗೆ ಹಲವು ಸಲ ಹೋಗಿ ಏಕಾಂತದಲ್ಲಿ ಮಾತನಾಡುವುದನ್ನು ಕಂಡರೆ ಜನ ಏನೆಂದೀತು? ಆಕೆಗೂ ಮರ್ಯಾದೆಯಲ್ಲ; ತನಗೂ ಹೆಸರಲ್ಲ. ಕಳಿಸಿದವರಿಗೆ ಮರ್ಯಾದೆಯಲ್ಲ. ಎರಡು ಊರಿನ ಕೀರ್ತಿಗೆ ಕಳಂಕ. ಆದ್ದರಿಂದಲೇ ದೊಡ್ಡ ನಡತೆಯೆಂದರೇನೆಂಬುದನ್ನು ತಿಳಿದಿದ್ದ ಅವನು ಆಕೆಗೆ ಹೇಳಿದ್ದು: ನೀನು ಹೀಗೆ ಬರಬೇಡ; ಇಬ್ಬರ ಹೆಸರಿಗೂ ಇದರಿಂದ ಕೆಡಕು ಎಂದು. ಎಂಥ ಸಮಯದಲ್ಲಿಯೂ ಹಿರಿಯರು ನಡೆದುಕೊಳ್ಳುವ, ಎಲ್ಲರೂ ನಡೆಯಲು ಕಲಿಯಬೇಕಾದ ರೀತಿ ಇದು.

---

# ಶಕುಂತಲೆ

ನಮ್ಮ ದೇಶಕ್ಕೆ ಭರತಖಂಡ ಎಂದು ಇನ್ನೊಂದು ಹೆಸರಿದೆ. ಭರತಖಂಡ ಎಂಬುದು ಬಹುಕಾಲದ ಹಿಂದೆ ಅದಕ್ಕೆ ಬಂದದ್ದು. ಭರತ ಎಂಬುದು ಒಬ್ಬ ದೊಡ್ಡ ಚಕ್ರವರ್ತಿಯ ಹೆಸರು. ಆತನು ಚಂದ್ರವಂಶದ ರಾಜ. ಆತನ ವಂಶದಲ್ಲಿಯೇ ಮುಂದಿನ ಕಾಲದಲ್ಲಿ ಪಾಂಡವರೂ ಕೌರವರೂ ಹುಟ್ಟಿದ್ದು. ಭರತನ ತಾಯಿ ಶಕುಂತಲೆ; ತಂದೆ ದುಷ್ಯಂತ.

ಮಹಾಭಾರತದ ಆದಿಪರ್ವದಲ್ಲಿ ಶಕುಂತಲೆಯ ಕಥೆ ಬರುವುದು. ಶಕುಂತಲೆ ಭರತನ ತಾಯಿ. ಆಕೆ ಪುರುಕುಲದ ರಾಜ ದುಷ್ಯಂತನನ್ನು ಮದುವೆಯಾದ ಸಂದರ್ಭವೂ ಈ ದಂಪತಿಗಳಿಗೆ ಭರತಕುಮಾರನು ಹುಟ್ಟಿದ ಸಂದರ್ಭವೂ ಈ ಮೂವರ ಸುತ್ತ ಬೆಳೆದ ಕಥೆಯೂ ಈ ಉಪಾಖ್ಯಾನದ ಕಥೆ. ಈ ಕಥೆಯನ್ನು ಎತ್ತಿಕೊಂಡು ನಮ್ಮ ದೇಶದ ಕವಿಗಳಲ್ಲಿ ತಲೆಯೊಡವೆ ಯಂತಿರುವ ಕಾಳಿದಾಸ ಕವಿ ಈಗ್ಗೆ ಸುಮಾರು ೧೫೦೦ ವರ್ಷಗಳ ಹಿಂದೆ ಉತ್ತಮವಾದ ಒಂದು ನಾಟಕವನ್ನು ಬರೆದು ತನಗೂ ನಮ್ಮ ದೇಶಕ್ಕೂ ಎಂದೆಂದಿಗೂ ನಿಲ್ಲುವ ಕೀರ್ತಿಯನ್ನು ಸಂಪಾದಿಸಿದ್ದಾನೆ. ಮೂಲ ಕಥೆ ಮಹಾಭಾರತದಲ್ಲಿ ಹೇಗಿದೆ ಎಂಬುದನ್ನು ಈ ಮುಂದೆ ಹೇಳಲಾಗಿದೆ.

## ೧

ಪುರು ವಂಶದಲ್ಲಿ ಹುಟ್ಟಿದ ದುಷ್ಯಂತನು ಬಹಳ ವೀರ್ಯವಂತನು. ತನ್ನ ಆಳಿಕೆಗೆ ಒಳಪಟ್ಟ ಭೂಮಿಯನ್ನು ನ್ಯಾಯದಿಂದ ಪಾಲಿಸುತ್ತಿದ್ದನು. ಎಲ್ಲ ರಾಜರಂತೆ ತನ್ನ ನಾಡಿನ ಉತ್ಪತ್ತಿಯ ನಾಲ್ಕರಲ್ಲಿ ಒಂದು ಭಾಗವನ್ನು ರಾಜಭಾಗವಾಗಿ ತೆಗೆದುಕೊಂಡು ಜನರ ಯೋಗಕ್ಷೇಮವನ್ನು ಬಹು ವಿತರಣೆಯಿಂದ ನೋಡಿಕೊಳ್ಳುತ್ತಿದ್ದನು. ಆತನು ಧರ್ಮಿಷ್ಠನೆಂದೂ, ಶಕ್ತಿವಂತನೆಂದೂ, ದಕ್ಷನಾದ ಅರಸೆಂದೂ ಲೋಕದಲ್ಲಿ ಕೀರ್ತಿಯಿತ್ತು. ಹೀಗೆಯೇ ಇರಲು, ಒಂದು ದಿನ ಆತನು ದೊಡ್ಡ ಸೈನ್ಯವನ್ನೂ ಅನೇಕ

ರಥಗಳನ್ನೂ ತೆಗೆದುಕೊಂಡು ಮೃಗದ ಬೇಟೆಗೆ ಸಂತೋಷದಿಂದ ಹೊರಟನು. ಮಧ್ಯಾಹ್ನದವರೆಗೂ ಬಹು ವಿಧವಾಗಿ ಬೇಟೆಯಾಡಿ ಕಾಡುಮೃಗಗಳನ್ನೂ ಪಕ್ಷಿಗಳನ್ನೂ ಕೊಲ್ಲುತ್ತ ಬಹು ದೂರ ವನದಲ್ಲಿ ತಿರುಗಾಡಿದನು. ಸುಮಾರು ಮಧ್ಯಾಹ್ನದ ಹೊತ್ತಿಗೆ ಮೃಗಗಳನ್ನು ಅನುಸರಿಸಿ ಶ್ರಮವಾಯಿತು; ದಣಿವಾಯಿತು. ಬಳಲಿದ್ದವನು ಸ್ವಲ್ಪ ವಿಶ್ರಮಿಸಿಕೊಂಡು ಹಿಂದಿರುಗಬೇಕೆಂದು ಯೋಚಿಸುತ್ತಿದ್ದನು. ಆಗ ಕಣ್ಣೆದುರಿಗೆ ಉತ್ತಮವಾದ ಒಂದು ವನಭಾಗ ಕಾಣಿಸಿತು. ಅದನ್ನು ಕಾಣುತ್ತಲೆ ರಾಜನ ಮನಸ್ಸಿಗೆ ಆಕರ್ಷಣೆಯಾಯಿತು. ಹಿರಿಯ ಬಿಲ್ಗಾರನಾದ ಆತನು ಆ ಕಡೆ ಹೊರಟು ಅಲ್ಲೊಂದು ಆಶ್ರಮವಿರುವುದನ್ನು ಕಂಡನು. ಆಶ್ರಮವನ್ನು ಕಂಡೊಡನೆಯೇ ರಾಜನಿಗೆ ತುಂಬಾ ಆನಂದ ಉಂಟಾಯಿತು. ಅಲ್ಲಿ ಪಶು ಪಕ್ಷಿ ಪ್ರಾಣಿ, ಗಿಡ ಬಳ್ಳಿ ಹೂ, ಹಣ್ಣು, ಕೊಳ, ಶುಚಿಯಾಗಿ ನಿತ್ಯಕರ್ಮಗಳಲ್ಲಿ ತೊಡಗಿದ್ದ ಜನ, ಈ ಎಲ್ಲ ಆತನಿಗೆ ಮೆಚ್ಚಿಕೆ ತಂದವು. ಜನ ತೃಪ್ತರಾಗಿ ವಿದ್ಯಾವ್ಯಾಸಂಗ ಮಾಡುತ್ತಿದ್ದುದನ್ನು ಕಂಡನು. ಆ ಆಶ್ರಮವು ಮಹಾತ್ಮರಾದ ಕಾಶ್ಯಪ ಋಷಿಗಳಿಗೆ ಸೇರಿದುದೆಂದು ಗೊತ್ತಾಯಿತು. ಪಕ್ಕದಲ್ಲಿಯೇ ಮಾಲಿನೀ ನದಿ. ಅದರ ಎರಡೂ ದಂಡೆಗಳಲ್ಲಿ ಚೆಲುವಾದ ತೋಟಗಳು. ನಡನಡುವೆ ಸಣ್ಣ ದ್ವೀಪಗಳು ಅಲಂಕಾರದಂತೆ ಇದ್ದುವು. ಅಲ್ಲಿನ ವ್ಯಾಸಂಗ, ವಿಪ್ರರು, ವ್ರತ, ಜಪ, ಹೋಮಪರರಾದ ಸಿದ್ಧರು, ದೇವಮಂದಿರಗಳು, ಪೂಜಾಕಾರ್ಯ – ಮುಂತಾದವನ್ನು ಕಂಡು ತಾನು ಬ್ರಹ್ಮಲೋಕಕ್ಕೇ ಬಂದಿರಬೇಕೆಂದುಕೊಂಡನು. ಆಶ್ರಮದ ಬಳಿಗೆ ಬಂದ ಕೂಡಲೆ ರಾಜನು ತನ್ನ ಬೇಟೆಯ ಶಸ್ತ್ರಗಳನ್ನೂ ವೇಷವನ್ನೂ ಕಳಚಿದನು. ರಾಜತನದ ಚಿಹ್ನೆಗಳನ್ನು ತೆಗೆದಿಟ್ಟು ಮಂತ್ರಿಪುರೋಹಿತರನ್ನು ಹಿಂದೆಯೇ ಬಿಟ್ಟು ಶುಭಕರವಾದ ಆ ಸ್ಥಳವನ್ನು ಪ್ರವೇಶಿಸಿದನು.

ಆತನ ಉದ್ದೇಶ ಆಶ್ರಮದೊಳಕ್ಕೆ ಹೋಗಿ ಕಶ್ಯಪರ ವಂಶದಲ್ಲಿ ಹುಟ್ಟಿದ ಕಣ್ವಮುನಿಯನ್ನು ಕಂಡು ಅವರಿಗೆ ವಂದನೆ ಮಾಡಬೇಕು, ಅವರ ಹರಕೆಯನ್ನು ಪಡೆದು ಹೋಗಬೇಕು ಎಂದಿತ್ತು. ಪರ್ಣಶಾಲೆಯಲ್ಲಿ ಕಣ್ವಋಷಿಗಳು ಇರಲಿಲ್ಲ. ಅಲ್ಲಿ ಎಲ್ಲವೂ ಬರಿದಾಗಿರುವುದನ್ನು

ನೋಡಿ ಗಂಭೀರವಾದ ಎತ್ತಿದ ಧ್ವನಿಯಲ್ಲಿ "ಒಳಗೆ ಯಾರು?" ಎಂದು ಕೇಳಿದನು. ರಾಜನ ಧ್ವನಿಯ ನಾದದಿಂದ ವನ ತುಂಬಿತು. ಈ ಧ್ವನಿಯನ್ನು ಕೇಳಿ ಲಕ್ಷ್ಮಿಯಂತಹ ರೂಪವುಳ್ಳ ಒಬ್ಬ ಕನ್ಯೆ ಹೊರಕ್ಕೆ ಬಂದಳು. ಆಕೆ ತಾಪಸಿಯಂತೆ ಉಟ್ಟು ತೊಟ್ಟು ಇದ್ದಳು. ಆಶ್ರಮದ ಬಾಗಿಲಿಗೆ ಬಂದು ನಿಂತಾತನ ಆಕಾರವನ್ನೂ ಲಕ್ಷಣವನ್ನೂ ರೆಪ್ಪೆ ಇಡದೆ ಒಂದು ಕ್ಷಣ ನೋಡಿ ಆತನು ಮಹಾರಾಜನೇ ಆಗಿರಬೇಕೆಂದು ಊಹಿಸಿದಳು. ಒಳಗೆ ಬರಬೇಕೆಂದು ವಿನಯದಿಂದ ಹೇಳಿ ಉಚಿತವಾದ ಪೀಠದಲ್ಲಿ ಕೂಡಿಸಿ ಅರ್ಘ್ಯಪಾದ್ಯಗಳನ್ನು ಕೊಟ್ಟು ಗೌರವಿಸಿದಳು. ಕ್ಷೇಮ ಸಮಾಚಾರಗಳನ್ನು ವಿಚಾರಿಸಿದಳು. ಒಳ್ಳೆಯ ಕುಲದಲ್ಲಿ ಹುಟ್ಟಿ ಒಳ್ಳೆಯ ವಿದ್ಯೆ ಕಲಿತ ಹೆಣ್ಣುಮಕ್ಕಳಿಗೆ ಒಪ್ಪುವ ರೀತಿಯಲ್ಲಿ, ಆತನಿಗೆ ತೋರಿಸಬೇಕಾದ ಮರ್ಯಾದೆಯನ್ನೆಲ್ಲ ತೋರಿಸಿ ಆಯಿತು. ಮುಗುಳು ನಗೆಯಿಂದ "ತಾವು ಯಾರು? ಏತಕ್ಕಾಗಿ ಆಶ್ರಮಕ್ಕೆ ದಯಮಾಡಿಸಿದ್ದೀರಿ? ನಾವು ಮಾಡಬಹುದಾದುದೇನು?" ಎಂದು ಕೇಳಿದಳು. ಸವಿಯಾಗಿ ಆಕೆ ಆಡಿದ ಮಾತನ್ನು ರಾಜನು ಕೇಳಿದನು. ಆಕೆಯ ಉಪಚಾರಕ್ಕೆ ತೃಪ್ತಿಪಟ್ಟನು. ಉತ್ತರವಾಗಿ, "ನನ್ನ ಹೆಸರು ದುಷ್ಯಂತ. ಮಹಾತ್ಮರಾದ ಕಣ್ವಋಷಿಗಳನ್ನು ಸೇವಿಸಿ ಹೋಗೋಣವೆಂದು ಇಲ್ಲಿಗೆ ಬಂದೆ. ಆ ಪೂಜ್ಯರು ಎಲ್ಲಿ ಹೋಗಿದ್ದಾರೆ?" ಎಂದು ಕೇಳಿದನು. ಆಕೆ, "ಹಣ್ಣು ಹೂಗಳನ್ನು ತರುವುದಕ್ಕಾಗಿ ತಂದೆ ಕಾಡಿಗೆ ಹೋಗಿದ್ದಾರೆ. ಒಂದು ಕ್ಷಣಕಾಲ ನಿರೀಕ್ಷಿಸಿ. ಅವರನ್ನು ನೋಡಿ ಹೋಗಬಹುದು" ಎಂದಳು. ಅದಕ್ಕೊಪ್ಪಿ ರಾಜನು ಕುಳಿತನು. ಆತನಿಗೆ ಸ್ವಲ್ಪ ವಿಶ್ರಾಂತಿ ದೊರೆಯಿತು. ಋಷಿ ಅಲ್ಲಿಲ್ಲದಿರುವುದು ಅವಕಾಶವಾಯಿತು.

ನಗುಮೊಗದ ಶಕುಂತಲೆಯನ್ನು ಕಂಡ ಕ್ಷಣದಿಂದಲೂ ರಾಜನಿಗೆ ಆಕೆಯ ಚೆಲುವನ್ನು ಕುರಿತು ಆಶ್ಚರ್ಯವಾಗಿತ್ತು. ತಪಸ್ಸಿಂದಲೂ ದಮದಿಂದಲೂ ಆಕೆಯ ದೇಹ ಹೊಳೆಯುತ್ತಿತ್ತು. ರೂಪಯೌವನ ಸಂಪನ್ನೆಯಾದ ಇಂತಹ ಚೆಲುವೆ ಇಲ್ಲಿ ಹೇಗಿದ್ದಾಳು ಎಂಬ ಸಂಗತಿ ಚೋದ್ಯವಾಗಿ ಕಾಣುತ್ತಿತ್ತು. ಮನಸ್ಸಿನ ಯೋಚನೆಗಳನ್ನು ನಿಲ್ಲಿಸ

ಬೇಕೆಂದು ಪ್ರಯತ್ನಪಟ್ಟನು. ತಡೆಯುಲಾಗಲಿಲ್ಲ. ಆಕೆಯನ್ನು ಕುರಿತು "ಸುಂದರಿ, ನೀನು ಯಾರು? ಯಾರವಳು? ವನಕ್ಕೆ ಏತಕ್ಕಾಗಿ ಬಂದೆ? ನಿನ್ನನ್ನು ಕಂಡಾಗಿನಿಂದ ನೀನು ನನ್ನ ಮನಸ್ಸನ್ನು ಅಪಹಾರ ಮಾಡಿದ್ದೀಯೆ. ನಿನ್ನ ವಿಷಯವನ್ನು ತಿಳಿಯಬೇಕೆಂಬ ಇಚ್ಛೆಯುಂಟಾಗಿದೆ" ಎಂದು ಹೇಳಿದನು. ಶಕುಂತಲೆ ನಗುನಗುತ್ತ "ನಾನು ಭಗವಾನ್ ಕಣ್ವರ ಮಗಳು" ಎಂದಳು. ಉತ್ತರದಿಂದ ಆತನ ಸಂದೇಹ ನಿವಾರಣೆ ಆಗಲಿಲ್ಲ. ಆಕೆಯನ್ನು ಕುರಿತು, "ಕಣ್ವರು ಲೋಕಪೂಜಿತರು, ಬ್ರಹ್ಮಚರ್ಯೆಯಲ್ಲಿರುವವರು. ಒಳ್ಳೆಯ ವ್ರತ ನೇಮಗಳನ್ನು ತಪ್ಪದೆ ನಡಸುವವರು. ಊರ್ಧ್ವರೇತರು. ನೀನು ಅವರ ಮಗಳು ಹೇಗಾದೆ? ಈ ಅಂಶದಲ್ಲಿ ನನಗೆ ಬಹಳ ಸಂಶಯ ಉಂಟಾಗಿದೆ, ಅದನ್ನು ಹರಿಸು" ಎಂದನು.

ಶಕುಂತಲೆ, "ಹಿಂದೆ ಇಲ್ಲಿಗೆ ಒಬ್ಬ ಋಷಿ ಬಂದು ನನ್ನ ಹುಟ್ಟಿನ ಸಂಗತಿಗಳನ್ನು ವಿಚಾರಿಸಿದರು. ಅವರಿಗೆ ಅದನ್ನು ವಿವರಿಸುತ್ತ ತಂದೆ ಕಣ್ವರು ಈ ಸಂಗತಿಯನ್ನೆಲ್ಲ ಹೀಗೆ ತಿಳಿಸಿದರು: ಒಂದು ಕಾಲದಲ್ಲಿ ಮಹರ್ಷಿಯಾದ ವಿಶ್ವಾಮಿತ್ರನು ಘೋರವಾಗಿ ತಪಸ್ಸು ಮಾಡುತ್ತಿದ್ದನು. ಇದನ್ನು ಕಂಡು ದೇವತೆಗಳ ಒಡೆಯನಾದ ಇಂದ್ರನಿಗೆ ತನ್ನ ಸ್ಥಾನ ಭದ್ರತೆಯ ವಿಷಯದಲ್ಲಿ ಬಹಳ ಭಯ ಉಂಟಾಯಿತು. ಆತನು ಎದುರಿಗಿದ್ದ ಮೇನಕೆಯನ್ನು ಬಳಿಗೆ ಕರೆದು 'ವಿಶ್ವಾಮಿತ್ರನು ಇತರರು ತಡೆಯಲಾರದಷ್ಟು ಉಗ್ರವಾದ ತಪಸ್ಸಿನಲ್ಲಿದ್ದಾನೆ. ಅವನಿರುವಲ್ಲಿಗೆ ಹೋಗು. ಅವನ ತಪಸ್ಸಿಗೆ ಅಡ್ಡಿಮಾಡು. ಅವನ ಮನಸ್ಸನ್ನು ಬೇರೆ ಕಡೆಗೆ ತಿರುಗಿಸಿ ನನಗೆ ಉಪಕಾರ ಮಾಡು' ಎಂದು ಅಪ್ಪಣೆ ಮಾಡಿದನು. ಅದನ್ನು ಕೇಳಿ ಮೇನಕೆಗೆ ಸ್ವಂತಕ್ಕಾಗಿ ಭೀತಿಯಾಯಿತು. ವಿಶ್ವಾಮಿತ್ರನ ತಪಸ್ಸು ಉಗ್ರವಾದ್ದರಿಂದ ಅವನ ಕೋಪ ಎಷ್ಟು ಭಯಂಕರವಾಗಬಲ್ಲುದು ಎಂದು ಚಿಂತಿಸಿ ನಡುಗಿದಳು. ವಿಶ್ವಾಮಿತ್ರನ ಅದ್ಭುತ ಶಕ್ತಿಯನ್ನು ಇಂದ್ರನ ನೆನಪಿಗೆ ತಂದಳು. ತನ್ನ ತೇಜಸ್ಸಿನಿಂದ ಲೋಕವನ್ನೆಲ್ಲ ಸುಡಬಲ್ಲ ಜಿತೇಂದ್ರಿಯನಾದ ಆತನ ಎದುರು ನನ್ನಂಥ ಹೆಂಗಸು ಹೇಗೆ ಹೋಗಬಲ್ಲೆ, ಆತನನ್ನು ಹೇಗೆ ಸ್ಪರ್ಶಿಸಬಲ್ಲೆ ಎಂದಳು. ಆದರೆ ಇಂದ್ರನು ಆಕೆಯ

ಒಡೆಯ. ಆತನ ಮಾತನ್ನು ಮೀರುವ ಹಾಗಿಲ್ಲ. ಆಕೆಗೆ ಅನೇಕ ಬಗೆಯ ಧೈರ್ಯದ ಮಾತುಗಳನ್ನು ಹೇಳಿ ಆಕೆ ಬೇಡಿದಂತೆ ವಸಂತ, ಮನ್ಮಥರ ಸಹಾಯವನ್ನು ಕೊಟ್ಟು ಇಂದ್ರನು ಆಕೆಯನ್ನು ಕಳಿಸಿ ಕೊಟ್ಟನು. ಅಪ್ಪಣೆಯನ್ನು ನೆರವೇರಿಸುವೆನೆಂದು ಹೇಳಿ ಅಲ್ಲಿಂದ ಭೂಮಿಗೆ ಇಳಿದು ತಪಸ್ಸು ಮಾಡುತ್ತಿದ್ದ ವಿಶ್ವಾಮಿತ್ರನ ಬಳಿಗೆ ಮೇನಕೆ ಆಟವಾಡುತ್ತ ಬಂದು ಕಾಣಿಸಿಕೊಂಡಳು. ಆಕೆಯ ರೂಪಸೌಭಾಗ್ಯವನ್ನು ಕಂಡ ಕೂಡಲೆ ಋಷಿಯ ಮನಸ್ಸು ಚಲಿಸಿ ಕಾಮವಶವಾಯಿತು. ಅವರಿಬ್ಬರ ಮಗಳಾಗಿ ಈ ಶಕುಂತಲೆ ಹುಟ್ಟಿದಳು. ತಾನು ಬಂದ ಕೆಲಸವಾಯಿತಲ್ಲ ಎಂದವಳು ಹುಟ್ಟಿದ ಮಗಳನ್ನು ಮಾಲಿನೀ ನದಿಯ ತೀರದಲ್ಲಿ ಬಿಟ್ಟು ಇಂದ್ರನ ಸಭೆಗೆ ಮೇನಕೆ ಬೇಗನೆ ಹಿಂದಿರುಗಿ ಹೋದಳು. ನಾನು ಸ್ನಾನಕ್ಕಾಗಿ ಆ ಸ್ಥಳಕ್ಕೆ ಹೋದಾಗ ನೆಲದಮೇಲೆ ಮಲಗಿದ್ದ ಮಗುವನ್ನು ಕಂಡೆ. ಅದನ್ನು ಮನೆಗೆ ಎತ್ತಿಕೊಂಡು ಬಂದು ಮಗಳ ಹಾಗೆ ಸಾಕಿದ್ದೇನೆ. ಮಗು, ನಿರ್ಜನವಾದ ವನದಲ್ಲಿ, ನದಿಯ ದಡದಲ್ಲಿದ್ದಾಗ ಅನೇಕ ಪಕ್ಷಿಗಳು (ಶಕುಂತಗಳು) ಅದರ ಸುತ್ತಲೂ ಸುತ್ತಿಕೊಂಡು ಆದರಿಸುತ್ತಿದ್ದವು. ಹೀಗೆ ಸುತ್ತಲೂ ಶಕುಂತಗಳ ಪರಿವಾರ ಉಳ್ಳವಳಾಗಿದ್ದುದರಿಂದ ಈಕೆಗೆ ಶಕುಂತಲೆ ಎಂದು ಹೆಸರಿಟ್ಟೆ – ಎಂದು ಹೇಳಿದರು. ನಾನು ಕಣ್ವರ ಮಗಳಾದುದು ಹೀಗೆ. ನನ್ನ ನಿಜವಾದ ಮಾತಾಪಿತೃಗಳನ್ನು ನಾನು ಎಂದೂ ಕಂಡವಳಲ್ಲ " ಎಂದು ಆ ಮಹಾರಾಜನಿಗೆ ತನ್ನ ಹುಟ್ಟಿನ ಸಂಗತಿಯನ್ನು ತಿಳಿಸಿದಳು. ಇದನ್ನು ಕೇಳಿದ ರಾಜನಿಗೆ ತುಂಬಾ ಸಂತೋಷವಾಯಿತು ; ಆಕೆ ಋಷಿಯ ಮಗಳಲ್ಲ – ಕ್ಷತ್ರಿಯ ಕನ್ಯೆ ಎಂಬುದು ತಿಳಿದು ಆಕೆಯನ್ನು ಪಡೆಯಬೇಕೆಂಬ ಆಸೆ ಬಲವಾಯಿತು.

ರಾಜ – ನೀನು ಹೇಳಿದುದರಿಂದ ರಾಜಪುತ್ರಿಯೆಂದು ನನಗೆ ಈಗ ವ್ಯಕ್ತವಾಯಿತು. ನನ್ನ ಭಾರ್ಯೆಯಾಗು. ನೀನು ಕೇಳಿದುದನ್ನು ಕೊಡು ತ್ತೇನೆ. ನನ್ನ ರಾಜ್ಯವೆಲ್ಲ ನಿನ್ನದಾಗುವುದು. ಗಾಂಧರ್ವ ರೀತಿಯಲ್ಲಿ ನನ್ನನ್ನು ಮದುವೆಯಾಗು. ಕ್ಷತ್ರಿಯರಿಗೆ ಗಾಂಧರ್ವ ವಿವಾಹ ಶ್ರೇಷ್ಠ ವೆನ್ನುವರು.

ಶಕುಂತಲೆ — ಮಹಾರಾಜ! ತಂದೆಯವರು ಹಣ್ಣು ತರುವುದಕ್ಕೆ ಹೋಗಿದ್ದಾರೆ; ಇನ್ನೊಂದು ಕ್ಷಣ ಇಲ್ಲಿ ಕಾಯಿರಿ. ಅವರು ಬಂದು ನನ್ನನ್ನು ನಿಮಗೆ ಕೊಡುತ್ತಾರೆ.

ದುಷ್ಯಂತ — ನೀನೇ ಒಪ್ಪಿ ನನ್ನವಳಾಗುವುದರಲ್ಲಿ ತಪ್ಪೇನೂ ಇಲ್ಲ. ನಿನಗಾಗಿಯೇ ನಾನು ಇಲ್ಲಿ ನಿಂತಿರುವುದು. ಭದ್ರೆ, ನಿನ್ನನ್ನು ಸ್ವತಂತ್ರಳಲ್ಲವೆಂದು ಯಾರು ಹೇಳಿದರು? ನಮಗೆ ನಾವೇ ಬಂಧುಗಳು, ನಾವೇ ಗತಿ. ಆದುದರಿಂದ ನಮ್ಮನ್ನು ನಾವು ದಾನವಾಗಿ ಕೊಟ್ಟುಕೊಳ್ಳಬಹುದು. ಹಾಗೆ ಮಾಡಿದ ದಾನ ಧರ್ಮವಾಗುತ್ತದೆ. ವಿವಾಹದಲ್ಲಿ ಎಂಟು ಬಗೆಯುಂಟು. ಅದರಲ್ಲಿ ಗಾಂಧರ್ವ ವಿವಾಹ ಕ್ಷತ್ರಿಯರಿಗೆ ತಕ್ಕುದು. ನಾನು ನಿನ್ನಲ್ಲಿಯೂ ನೀನು ನನ್ನಲ್ಲಿಯೂ ಇಷ್ಟವುಳ್ಳವರಾಗಿರುವಾಗ ಈ ರೀತಿ ನೀನು ನನ್ನ ಹೆಂಡತಿಯಾಗಲು ಒಪ್ಪಬಹುದು.

ಶಕುಂತಲೆ — ಹಾಗೆ ಮಾಡುವುದು ಧರ್ಮವಾಗಿ, ನನ್ನ ಮೇಲೆ ನನಗೆ ಒಡೆತನವಿರುವುದು ನಿಜವಾದರೆ, ನನ್ನನ್ನು ದಾನಮಾಡಿಕೊಳ್ಳುವ ಸಂಬಂಧದಲ್ಲಿ ಒಂದು ನಿರ್ಬಂಧವುಂಟು. ಅದನ್ನು ಕೇಳಿ ನಿಮಗೆ ಒಪ್ಪಿಕೆಯಾದರೆ ನಿಮ್ಮವಳಾಗುತ್ತೇನೆ. ನನ್ನ ಹೊಟ್ಟೆಯಲ್ಲಿ ಹುಟ್ಟಿದ ಮಗನು ನಿಮ್ಮ ಅನಂತರ ಮಹಾರಾಜನಾಗಬೇಕು. ನಿಮ್ಮ ಕಾಲದಲ್ಲಿ ಯುವರಾಜನಾಗಿರಬೇಕು. ಅದಕ್ಕೊಪ್ಪುವ ಪಕ್ಷದಲ್ಲಿ ನಿಮ್ಮ ಸಂಗಕ್ಕೆ ಒಡಂಬಡುತ್ತೇನೆ.

ಮುಂದಿನ ಯಾವ ವಿಚಾರವನ್ನೂ ಮಾಡದೆ 'ಹಾಗೆಯೇ ಆಗಲಿ' ಎಂದು ರಾಜನು ಒಪ್ಪಿದನು. ಅನಿಂದಿತವಾದ ನಡತೆಯುಳ್ಳ ಆಕೆಯನ್ನು ಕುರಿತು ಆತನಿಗೆ ಗೌರವವುಂಟಾಯಿತು. ಅಲ್ಲದೆ 'ನಿನ್ನನ್ನು ಯೋಗ್ಯವಾದ ರೀತಿಯಲ್ಲಿ ನನ್ನ ಪಟ್ಟಣಕ್ಕೆ ಕರೆದುಕೊಂಡುಹೋಗುತ್ತೇನೆ' ಎಂದು ಹೇಳಿ, ಆಕೆಯ ಕೈಹಿಡಿದು ಆಕೆಯ ಸಹವಾಸ ಮಾಡಿದನು. ಸುಖವಾಗಿ ಸ್ವಲ್ಪ ಕಾಲ ಕಳೆದಮೇಲೆ ರಾಜನು ರಾಜಧಾನಿಗೆ ಮರಳುವ ಸಮಯ ಬಂದಿತು. ಅನೇಕ ಬಗೆಯಾಗಿ ಆಕೆಗೆ ನಂಬಿಕೆ ಕೊಟ್ಟು ಪುನಃ ಪುನಃ ಸಮಾಧಾನ ಹೇಳಿ, ಪಟ್ಟಣಕ್ಕೆ ಹಿಂದಿರುಗಲು ಸಿದ್ಧನಾದನು. ಪ್ರಯಾಣಕ್ಕೆ ಮುಂಚೆ ಪ್ರೀತಿಯ ಮಾತುಗಳನ್ನಾಡಿ "ನಿನಗಾಗಿ ಚತುರಂಗ ಸೈನ್ಯವನ್ನು ಕಳಿಸಿ

ಕೊಡುತ್ತೇನೆ. ನಿನ್ನನ್ನು ನನ್ನ ಪಟ್ಟಣಕ್ಕೆ ಬರಮಾಡಿಕೊಳ್ಳುತ್ತೇನೆ" ಎಂದು ಮುಂತಾಗಿ ನೆಚ್ಚಿಕೆ ಹೇಳಿ ತನ್ನ ಪಟ್ಟಣವನ್ನು ಕುರಿತು ಹೊರಟನು. ಕಾಶ್ಯಪರು ತನ್ನ ನಡತೆಯನ್ನು ಕುರಿತು ಏನು ಮಾಡುವರೋ. ಅವರು ಕೋಪಿಸಿಕೊಂಡರೇನು ಗತಿ ಎಂದು ಅವನಿಗೆ ಮನಸ್ಸಿನಲ್ಲಿ ಚಿಂತೆ. ಈ ಶಂಕೆಯಲ್ಲಿಯೇ ತನ್ನ ಪಟ್ಟಣವನ್ನು ಸೇರಿದನು.

## ೨

ಇದೆಲ್ಲ ನಡೆದು ಸ್ವಲ್ಪ ಹೊತ್ತಾದ ಮೇಲೆ ಕಣ್ವರು ಆಶ್ರಮಕ್ಕೆ ಹಿಂದಿರುಗಿ ಬಂದರು. ಎಂದಿನಂತೆ ಶಕುಂತಲೆ ಧಾರಾಳವಾಗಿ ನಡೆದುಕೊಳ್ಳಲಿಲ್ಲ. ಹಿಂದೆ ಕಾಣದಿದ್ದ ಒಂದು ನಾಚಿಕೆ ಆಕೆಯನ್ನು ತಡೆಯುವಂತಿತ್ತು. ತಂದೆಯ ಬಳಿಗೆ ಹೋಗಲಾರದೆ ಶಕುಂತಲೆ ಲಜ್ಜೆಪಡುವುದನ್ನು ಋಷಿಗಳು ಕಂಡರು. ಮುಹೂರ್ತಕಾಲ ಯೋಚಿಸಲು ಆ ಮಹಾತಪಸ್ವಿಗೆ ತಮಗಿದ್ದ ತಪಶ್ಶಕ್ತಿಯಿಂದ ನಡೆದುದೆಲ್ಲವೂ ಅರ್ಥವಾಯಿತು. ಸಂತೋಷವಾಯಿತು. ನನ್ನನ್ನು ಅನಾದರಿಸಿ ಇಂದು ಯಾವ ಕಾರ್ಯ ನಡೆಯಿತೋ ಇದು ಧರ್ಮವನ್ನೇನು ಮುರಿಯಲಿಲ್ಲ ತಾಯಿ. ನೀನು ರಾಜವಂಶದಲ್ಲಿ ಹುಟ್ಟಿದವಳು. ರಾಜನನ್ನು ಸೇರಿದ್ದೀಯೆ. ಭಯಕ್ಕೆ ಏನೂ ಕಾರಣವಿಲ್ಲ. ಆದುದರಿಂದ ಶೋಕಬೇಡ. ಕ್ಷತ್ರಿಯರಿಗೆ ಗಾಂಧರ್ವ ವಿವಾಹವು ಶ್ರೇಷ್ಠವಾದದ್ದು. ದುಷ್ಯಂತಮಹಾರಾಜನು ಮಾನವರಲ್ಲಿ ಶ್ರೇಷ್ಠನು, ಧರ್ಮಾತ್ಮನು ಮಹಾತ್ಮನು. ಪರಸ್ಪರ ಪ್ರೇಮದಿಂದ ನಿಮ್ಮ ಸಂಗ ರಹಸ್ಯವಾಗಿ ನಡೆದಿದೆ ನಿನ್ನ ಹೊಟ್ಟೆಯಲ್ಲಿ ಹುಟ್ಟುವ ಮಗನು ಮಹಾಬಲನೂ ಮಹಾತ್ಮನೂ ಆಗುತ್ತಾನೆ. ಅವನ ಕೀರ್ತಿ ಹಿರಿಯದಾಗುತ್ತದೆ. ಅವನು ಸಾಗರಾಂತವಾದ ಭೂಮಂಡಲವನ್ನು ಆಳುತ್ತಾನೆ. ಚಕ್ರವರ್ತಿಯಾದ ಆತನ ಕೈಗೆ ಎದುರಿಲ್ಲವಾಗುತ್ತದೆ' ಎಂದನು. ಆಕೆಯು ಆತನ ಪಾದಗಳನ್ನು ತೊಳೆದಳು. ಆತನು ಹೊತ್ತು ತಂದ ಹಣ್ಣಿನ ಭಾರವನ್ನು ಇಳಿಸಿಕೊಂಡಳು. ಋಷಿಗೆ ಸ್ವಲ್ಪ ವಿಶ್ರಾಂತಿ ದೊರೆಯಿತು. ಆಗ, ತಾನು ಪತಿಯಾಗಿ ವರಿಸಿರುವ ಪುರುಷೋತ್ತಮನಾದ ದುಷ್ಯಂತನಿಗೂ ಅವನ ಸಚಿವವರ್ಗಕ್ಕೂ ತಾವು

ಪ್ರಸನ್ನರಾಗಬೇಕು' ಎಂದು ತಂದೆಯನ್ನು ಪ್ರಾರ್ಥಿಸಿದಳು. ಕಣ್ವಋಷಿ – 'ಮಗಳೆ, ನಿನ್ನ ಕಾರಣದಿಂದ ನಾನು ಅವನಲ್ಲಿ ಪ್ರಸನ್ನನಾಗಿಯೇ ಇದ್ದೇನೆ. ಅವನ ಪರವಾಗಿ ನೀನು ಇಷ್ಟಪಡುವ ವರವನ್ನು ಕೊಡುತ್ತೇನೆ' ಎಂದನು. ದುಷ್ಯಂತನಿಗೆ ಹಿತವನ್ನು ಬಯಸಿದ ಶಕುಂತಲೆ 'ಆತನು ಧರ್ಮಿಷ್ಠನಾಗಲಿ, ರಾಜ್ಯಚ್ಯುತನಾಗದೆ ಬದುಕಲಿ' ಎಂದು ಕೋರಿದಳು. ಕಣ್ವರು ಆಕೆಗೆ ಆ ವರವನ್ನೂ ಕರುಣಿಸಿದರು.

ದುಷ್ಯಂತನು ಆಕೆಗೆ ಮಾತು ಕೊಟ್ಟು ತನ್ನೂರಿಗೆ ಹೋಗಿರುವಾಗ ಆತನ ಅಂಶ ಆಕೆಯ ಬಸಿರಲ್ಲಿ ಬೆಳೆಯುತ್ತಿತ್ತು. ದಿನ, ಪಕ್ಷ, ಮಾಸ, ಋತು, ಅಯನ ಕಳೆದುವು. ಪೂರ್ತಿ ಮೂರು ವರ್ಷ ಮುಗಿದ ಮೇಲೆ ಆಕೆ ಉರಿವ ಬೆಂಕಿಯಂತೆ ಕಾಂತಿಯುತನಾಗಿಯೂ ರೂಪ ಔದಾರ್ಯಗುಣೋಪೇತನಾಗಿಯೂ ಇರುವ ಒಬ್ಬ ಮಗನನ್ನು ಹೆತ್ತಳು. ಕಣ್ವರು ಮಗುವಿಗೆ ಜಾತಕರ್ಮ ಮುಂತಾದ ಸಂಸ್ಕಾರಗಳನ್ನು ಮಾಡಿದರು. ಮಗು ಚೆನ್ನಾಗಿ ಬೆಳೆದು ಅಭಿವೃದ್ಧಿಗೊಂಡಿತು. ಬೆಳ್ಳಗೆ ಹಲ್ಲು; ಕೈಯಲ್ಲಿ ಚಕ್ರದ ಅಂಕಿತ. ದೊಡ್ಡ ತಲೆಗುಂಡು; ಮಹಾ ಬಲಶಾಲಿ; ಎಳೆತನದಲ್ಲಿಯೇ ಗುಡ್ಡಗಳಲ್ಲಿ ಓಡಿಯಾಡಿ ಸಿಂಹಗಳನ್ನು ಕೊಲ್ಲುವನು; ದೇವಗರ್ಭದಿಂದ ಹುಟ್ಟಿದವನಂತೆ ಕುಮಾರನು ದಿನದಿನಕ್ಕೆ ಬೆಳೆದನು.

ಇತ್ತ ರಾಜಧಾನಿಗೆ ಬಂದ ದುಷ್ಯಂತನಿಗೆ, ತನ್ನ ನಡತೆಯಿಂದ ಕಣ್ವ ಋಷಿಗಳು ಕೋಪಿಸಿಕೊಂಡು ಇನ್ನೇನು ಮಾಡುವರೋ ಎಂದು ಮೊದ ಮೊದಲು ಭಯವಾದ್ದರಿಂದ ಶಕುಂತಲೆಯ ನೆನಪು ಮೇಲೆ ಮೇಲೆ ಬಂದರೂ ಅದನ್ನು ಅಡಗಿಸಲು ಪ್ರಯತ್ನಪಟ್ಟನು. ಹೆಚ್ಚು ಕಾಲ ಕಳೆದ ಮೇಲೆ ಆಶ್ರಮದ ಆ ಹುಡುಗಿಯನ್ನು ಮರೆತೇ ಬಿಟ್ಟನು.

## ೩

ಹೀಗೆ ಆರು ವರ್ಷ ಕಳೆಯಿತು. ಹುಡುಗನು ಹುಲಿ, ಸಿಂಹ, ಕಾಡುಹಂದಿ, ಆನೆ, ತೋಳಗಳನ್ನು ತನ್ನ ತೋಳಿನ ಬಲದಿಂದ ಹಿಡಿದು ಅವು ತನ್ನ ಅಂಕೆಯಲ್ಲಿರುವಂತೆ ಬಲಾತ್ಕರಿಸುವನು; ಆಶ್ರಮದ ಗಿಡಗಳಿಗೆ

ಕಟ್ಟಿ ಹಾಕುವನು. ಇಷ್ಟಬಂದಂತೆ ಅವುಗಳ ಮೇಲೆ ಹತ್ತಿ ಸವಾರಿ ಮಾಡುವನು; ಅವುಗಳೊಡನೆ ಆಟವಾಡುವನು; ಯಾವ ದುಷ್ಟ ಮೃಗಗಳಾಗಲಿ, ಕೆಟ್ಟ ಜನರಾಗಲಿ ಕಣ್ವರ ಆಶ್ರಮದೊಳಕ್ಕೆ ಬಾರ ದಂತಾಯಿತು. ಈತನು ಎಲ್ಲವನ್ನೂ ದಮನಮಾಡಬಲ್ಲವನಾದ್ದರಿಂದ ಋಷಿಗಳು ಇವನಿಗೆ ಸರ್ವದಮನನೆಂಬ ಹೆಸರಿಟ್ಟು ಕರೆದರು. ಹೆಸರಿಗೆ ತಕ್ಕ ಶಕ್ತಿ, ಶಕ್ತಿಗೆ ತಕ್ಕ ಹೆಸರು ಉಳ್ಳ ಕುಮಾರನ ವಿಕ್ರಮ, ಓಜಸ್ಸು, ಬಲ ಏಳಿಗೆಗೊಂಡವು. ಕಣ್ವರ ಅತಿಮಾನುಷವಾದ ಈ ಕುಮಾರನ ಸಾಹಸ ಗಳನ್ನು ನೋಡಿದರು. ಈತನು ಯುವರಾಜನಾಗಬೇಕಾದ ಸಮಯ ಬಂದಿತೆಂದು ಶಕುಂತಲೆಗೆ ಹೇಳಿದರು. ಶಿಷ್ಯನನ್ನು ಬಳಿಗೆ ಕರೆದು, — 'ಈ ಶಕುಂತಲೆಯನ್ನು ಅವಳ ಮಗನೊಡನೆ ಆಶ್ರಮದಿಂದ ಇಂದೇ ಕರೆದುಕೊಂಡು ಹೋಗಿ ಬೇಗ ಆಕೆಯ ಗಂಡನಲ್ಲಿಗೆ ಸೇರಿಸಿಬನ್ನಿ. ತಾಯಿ ಕಡೆಯ ಬಳಗದವರಲ್ಲಿ ಹೆಂಗಸರು ಬಹುಕಾಲ ವಾಸಮಾಡಿಕೊಂಡಿರುವುದು ಶೋಭಿಸದು. ಅವರ ಕೀರ್ತಿ ಚಾರಿತ್ರ ಧರ್ಮಗಳಿಗೆ ಕುಂದುಂಟಾಗುವುದು. ಆದ್ದರಿಂದ ಕರೆದುಕೊಂಡು ಹೋಗಿ ಅಲ್ಲಿ ಬಿಟ್ಟು ಬನ್ನಿ' ಎಂದು ಅವರಿಗೆ ಅಪ್ಪಣೆಮಾಡಿದರು.

'ಆಗಲಿ' ಎಂದು ಒಪ್ಪಿ ಆ ಮಹಾನುಭಾವರು ಹುಡುಗನ ಕೈಹಿಡಿದು ಕೊಂಡು ದುಷ್ಯಂತನ ಪ್ರತಿಷ್ಠಾನ ಪಟ್ಟಣದ ಕಡೆಗೆ ನಡೆದರು. ದಾರಿಯಲ್ಲಿ ವನಗಳನ್ನು ದಾಟಿದರು. ನದಿಗಳನ್ನೂ ಬೆಟ್ಟಗಳನ್ನೂ ದಾಟಿದರು. ಪುಣ್ಯಾಶ್ರಮಗಳನ್ನು ನೋಡುತ್ತ ನಡೆದರು. ನಡೆದು ಆಯಾಸವಾಯಿತು. ಮೆಲ್ಲನೆ ನಡೆದು ಮಧ್ಯಾಹ್ನದ ವೇಳೆಗೆ ಪ್ರತಿಷ್ಠಾನ ಪಟ್ಟಣವನ್ನು ಮುಟ್ಟಿದರು.

ಅರಮನೆಯ ಬಾಗಿಲನ್ನು ಸೇರುತ್ತಲೆ ಆಕೆ ಬಂದಳೆಂಬ ಸಮಾಚಾರ ವನ್ನು ಮುಂದಿದ್ದವರು ಹೋಗಿ ರಾಜನಿಗೆ ಅರಿಕೆಮಾಡುತ್ತಿರಲು ಆಕೆ ಮಗನೊಡನೆ ಸಭೆಯನ್ನು ಪ್ರವೇಶಿಸಿದಳು. ರಾಜನೆದುರಿಗೆ ಯಾವ ರೀತಿ ನಡೆದುಕೊಳ್ಳಬೇಕೊ ಆ ರೀತಿ ಮರ್ಯಾದೆಯಿಂದ ಆಕೆಯೂ ಎಳೆಯ ಸೂರ್ಯನ ವರ್ಚಸ್ಸುಳ್ಳ ಮಗನೂ ನಡೆದುಕೊಂಡರು.

ಇದನ್ನೆಲ್ಲ ನೋಡುತ್ತಿದ್ದ ರಾಜನಿಗೆ ಧರ್ಮಬುದ್ಧಿ ಇತ್ತಾದ್ದರಿಂದ, ತಾನು ಯಾವ ರೀತಿ ನಡೆದುಕೊಳ್ಳಬೇಕೆಂದು ಸ್ವಲ್ಪ ಸಮಯ ಯೋಚನೆ ಯುಂಟಾಯಿತು. ಮೇಲೆ ಆಕೆಯನ್ನು ಕುರಿತು "ನೀನು ಬಂದ ಕಾರ್ಯ ವೇನು, ಹೇಳು, ಮಾಡಿಕೊಡುತ್ತೇನೆ; ಸಂದೇಹಪಡಬೇಡ; ವಿಶೇಷವಾಗಿ ನೀನು ಮಗನನ್ನು ಹೆತ್ತ ತಾಯಿ" ಎಂದನು.

ಶಕುಂತಲೆ — ಮಹಾರಾಜ, ಈ ಮಗು ನಿಮ್ಮ ಮಗನು; ನನ್ನ ಹೊಟ್ಟೆಯಲ್ಲಿ ಹುಟ್ಟಿದವನು. ಆದ್ದರಿಂದ ಇವನಿಗೆ ಯುವರಾಜ ಪದವಿ ಯನ್ನು ಕೊಟ್ಟು ಅಭಿಷೇಕ ಮಾಡಬೇಕು. ಪೂರ್ವದಲ್ಲಿ ನನ್ನನ್ನು ಕಂಡು ನನ್ನೊಡನೆ ಸಮಾಗಮ ಮಾಡುವುದಕ್ಕೆ ಮುಂಚೆ ನೀವು ಆ ರೀತಿ ಮಾತು ಕೊಟ್ಟಿರಿ. ಅದರಂತೆ ನಡೆದುಕೊಳ್ಳಬೇಕು. ಮಹಾಬಾಹು, ಕಣ್ವಾಶ್ರಮಕ್ಕೆ ನೀವು ದಯಮಾಡಿಸಿದಾಗ ನಡೆದುದನ್ನು ನೆನಪಿಗೆ ತಂದುಕೊಳ್ಳಬೇಕು.

ಇದನ್ನು ಕೇಳಿದ ರಾಜನು ಆಳವಾಗಿ ಆಲೋಚಿಸಿದನು. ಈಕೆ, ಈ ಮಗ, ಈಕೆಯ ಮಂದಹಾಸ ಎಲ್ಲ ಮನಸ್ಸಿಗೆ ಬಂದುವು. ಸತ್ಯ ತಿಳಿಯಿತು. ಕೆಲವು ಕಾಲ ಮನಸ್ಸಿನಲ್ಲಿ ಸುಖಪಟ್ಟನು. ಆಕೆಯ ಮಾತು ಕಿವಿಗೆ ಕೇಳಿಸಿ ರಾಜನಿಗೆ ನೆನಪು ಪೂರ್ತಿ ಆಗಿದ್ದರೂ ಆಕೆಯನ್ನು ಕುರಿತು ದುಷ್ಯಂತನು, 'ನಿನ್ನೊಡನೆ ಧರ್ಮ, ಕಾಮ, ಅರ್ಥ ಯಾವ ಸಂಬಂಧವನ್ನೂ ಮಾಡಿದ ನೆನಪು ನನಗಿಲ್ಲ. ದುಷ್ಟ ತಾಪಸೀ ನೀನು ಯಾರು? ಹೋಗುವುದಾದರೆ ಹೋಗು; ನಿಲ್ಲುವುದಾದರೆ ನಿಲ್ಲು; ನಿನ್ನ ಇಷ್ಟ ಬಂದಂತೆ ಮಾಡು; ನನಗೂ ನಿನಗೂ ಯಾವ ಸಂಬಂಧವೂ ಇಲ್ಲ' ಎಂದನು.

ಕಠಿಣವಾದ ಈ ಮಾತನ್ನು ಕೇಳಿ ಶಕುಂತಲೆಗೆ ನಾಚಿಕೆಯಾಯಿತು. ಆಕೆ ತುಂಬ ಅಭಿಮಾನಶಾಲಿ. ಒಂದು ಕ್ಷಣಕಾಲ ಏನು ಮಾಡುವುದಕ್ಕೂ ತೋಚದೆ, ಸುಮ್ಮನೆ ಆಲೋಚಿಸಿದಳು. ಸ್ಥಾಣುವಿನಂತೆ ಸ್ವಲ್ಪ ಕಾಲ ನಿಶ್ಚಲಳಾಗಿದ್ದಳು. ಒಂದು ಕಡೆ ದುಃಖ; ಒಂದು ಕಡೆ ಕೋಪ; ಆಕೆಯ ಕಣ್ಣು ಕೆಂಪಾದವು. ಓಷ್ಠ ಅರಳಿದವು; ಕಂಪಿಸಿದವು. ಕಡೆಗೆ ಕ್ರುದ್ಧಳಾಗ ಶಕುಂತಲೆ ರಾಜನನ್ನು ಕಡೆಗಣ್ಣಿನ ನೋಟದಿಂದ ಸುಡುವಂತೆ ನೋಡಿದಳು. ಗಂಡನ ಕಡೆಗೆ ತಿರುಗಿ, ಆದರೂ ಮರ್ಯಾದೆ ಮೀರದೆ, ಈ ಮಾತುಗಳನ್ನು

ಹೇಳಿದಳು : " ಮಹಾರಾಜ, ಎಲ್ಲವನ್ನೂ ತಿಳಿದೂ ಏಕೆ ಹೀಗೆ ನುಡಿಯು ತ್ತಿದ್ದೀಯೆ ? ನಿನ್ನ ಹೃದಯಕ್ಕೆ ಗೊತ್ತು ನಾನಾರೆಂಬುದು. ನನ್ನ ಮಾತು ನಿಜವೇ ಸುಳ್ಳೇ ಎಂಬುದೂ ತಿಳಿದಿದೆ. ನಿನ್ನ ಪವಿತ್ರವಾದ ಅಂತಃಸಾಕ್ಷಿಗೆ ಅವಮಾನ ಮಾಡುತ್ತಿದ್ದೀಯೆ. ಪಾಪಕಾರ್ಯ ಮಾಡುತ್ತ ಯಾರಿಗೂ ನೀನು ಮಾಡುತ್ತಿರುವುದು ತಿಳಿಯದು ಎಂದುಕೊಳ್ಳುವೆಯೇನೋ. ನಿಜವನ್ನು ಬೇರೆಯಾಗಿ ಭಾವಿಸಿ ನಿನಗೆ ನೀನೇ ವಂಚನೆಮಾಡಿಕೊಳ್ಳಬೇಡ. ಸುಳ್ಳನ್ನು ಹೇಳುವುದು ಪಾಪಕರ. ಕಳ್ಳರಂತೆ ನಡೆದುಕೊಳ್ಳಬೇಡ. ನಿನ್ನ ಬಳಿಗೆ ಒಬ್ಬಳೇ ಬಂದಿರುವುದರಿಂದ ನೀನು ನನ್ನನ್ನು ಹೀನವಾಗಿ ಎಣಿಸುತ್ತಿದ್ದೀಯೆ. ನಿನ್ನ ಹೃದಯವು ಹೇಳುತ್ತಿರುವುದನ್ನು ಅರಿಯದೆ, ನೀನು ಮಾಡುತ್ತಿರುವುದು ಪಾಪವೆಂದು ತಿಳಿಯದೆ ಇದ್ದೀಯೆ. ತಿಳಿದು ತಿಳಿದೂ ಪಾಪಮಾಡಿ ನನಗೆ ಏನೂ ತಿಳಿಯದೆನ್ನುತ್ತಿದ್ದೀಯೆ. ನಿನ್ನ ಅಂತ ರಾತ್ಮನಿಗೂ ದೇವತೆಗಳಿಗೂ ನಮ್ಮ ಸಂಬಂಧ ತಿಳಿದಿದೆ. ಸರ್ವಸಾಕ್ಷಿಗಳಾದ ಸೂರ್ಯ, ಚಂದ್ರ, ಅಗ್ನಿ, ವಾಯು, ಸ್ವರ್ಗ, ಭೂಮಿ, ನೀರು, ಹೃದಯ, ಯಮ, ಹಗಲು, ರಾತ್ರಿ, ಸಂಜೆ, ಈ ಎಲ್ಲರಿಗೂ ನರರ ವೃತ್ತಿಯಲ್ಲಿನ ಧರ್ಮ ಗೊತ್ತಾಗಿರುವುದು. ದುಷ್ಕೃತ್ಯವನ್ನು ಯಮನು ಖಂಡಿತವಾಗಿ ದಂಡಿಸುವನು. ನಿನ್ನ ಅಂತಃಸಾಕ್ಷಿಗೆ ಹೇಗೆ ತೃಪ್ತಿಯಾದೀತು ಇಂಥ ನಿನ್ನ ನಡವಳಿಕೆಯಿಂದ ? ಅನ್ಯಾಯ ಮಾಡಿದವರಿಗೆ ದೇವತೆಗಳು ಶ್ರೇಯಸ್ಸನ್ನುಂಟುಮಾಡುವರೆ ? ತಾನಾಗಿ ಬಂದು ದೊರೆತವಳು ಎಂದು ಪತಿವ್ರತೆಯಾದ ನನ್ನನ್ನು ಅವಮಾನಪಡಿಸುತ್ತಿರುವೆ. ನಿನಗೆ ಇದು ತರವಲ್ಲ. ಎದುರಿಗೆ ಇರುವ ನಿನ್ನ ಹೆಂಡತಿಯಾದ ನಾನು ಅರ್ಘ್ಯಾರ್ಹಳು; ಅಂಥವಳಿಗೆ ಮರ್ಯಾದೆ ತೋರಿಸದೆ ಇರುವೆ. ನೆರೆದ ಈ ಸಭೆಯಲ್ಲಿ ಪ್ರಾಕೃತನಂತೆ ನನ್ನನ್ನು ಕುರಿತು ಹೀಗೆ ನುಡಿಯುತ್ತಿರುವೆ " ಎಂದು ಟೀಕೆ ಮಾಡಿದಳು. ಜಾಯೆ, ಭಾರ್ಯೆಯೆಂಬ ಮಾತುಗಳ ನಿಜವಾದ ಅರ್ಥವನ್ನೂ ಪುತ್ರನೆಂದರೇನೆಂಬುದನ್ನೂ ವಿವರಿಸಿ ಹೇಳಿದಳು. ಕಡೆಗೆ, ಎಷ್ಟು ಬಗೆಯಾಗಿ ತಿಳಿಸಿದರೂ ನಾನು ಹೇಳುತ್ತಿರುವುದನ್ನು ಕೇಳದೆ ಇದ್ದೀಯೆ, ನಾನು ಬೇಡು ವುದನ್ನು ನಡಸಿಕೊಡದಿದ್ದರೆ ನಿನ್ನ ತಲೆ ನೂರು ಹೋಳಾಗುವುದು ಎಂದಳು.

ಸಾ ಭಾರ್ಯಾ ಯಾ ಗೃಹೇ ದಕ್ಷಾ ಸಾ ಭಾರ್ಯಾ ಯಾ ಪ್ರಜಾವತೀ
ಸಾ ಭಾರ್ಯಾ ಯಾ ಪತಿಪ್ರಾಣಾ ಸಾ ಭಾರ್ಯಾ ಯಾ ಪತಿವ್ರತಾ
ಅರ್ಧಂ ಭಾರ್ಯಾ ಮನುಷ್ಯಸ್ಯ ಭಾರ್ಯಾ ಶ್ರೇಷ್ಠತಮಃ ಸಖಾ
ಭಾರ್ಯಾ ಮೂಲಂ ತ್ರಿವರ್ಗಸ್ಯ ಭಾರ್ಯಾ ಮಿತ್ರಂ ಮರಿಷ್ಯತಃ
ಭಾರ್ಯಾವನ್ತಃ ಕ್ರಿಯಾವನ್ತಃ ಸಭಾರ್ಯಾ ಗೃಹಮೇಧಿನಃ
ಭಾರ್ಯಾವನ್ತಃ ಪ್ರಮೋದನ್ತೇ ಭಾರ್ಯಾವನ್ತಃ ಶ್ರಿಯಾನ್ವಿತಾಃ

—ಪ್ರಿಯಮತಿಯಾದ ಹೆಂಡತಿ ಏಕಾಂತದಲ್ಲಿ ಗಂಡನಿಗೆ ಗೆಳತಿ; ಧರ್ಮ ಕಾರ್ಯಗಳಲ್ಲಿ ತಂದೆ; ಆರ್ತ ಸ್ಥಿತಿಯಲ್ಲಿ ತಾಯಿ; ಕಾಂತಾರಗಳಲ್ಲಿ ಸಂಚರಿಸುವಾಗ ವಿಶ್ರಾಮ; ಯಾರು ಭಾರ್ಯೆಯುಳ್ಳವರೋ ಅವರನ್ನು ನೆಚ್ಚಬಹುದು; ಆದ್ದರಿಂದ ಭಾರ್ಯೆಯೇ ಗತಿಸ್ವರೂಪಳಾಗುತ್ತಾಳೆ ಎಂದಳು. ಇಹಪರ ಸುಖಗಳನ್ನೂ ಗತಿಗಳನ್ನೂ ಅವನಿಗೆ ವಿವರಿಸಿದಳು. ಆದ್ದರಿಂದಲೇ ಗಂಡುಮಗನನ್ನು ಹೆತ್ತ ಭಾರ್ಯೆಯನ್ನು ತಾಯಂತೆ ಕಾಣಬೇಕೆಂದು ತಿಳಿಸಿದಳು. ನೆಲದ ದೂಳು ಮೈಗೆ ಅಂಟಿಕೊಂಡಿರಲು ಅಂಥ ಮಗನನ್ನು ತಂದೆ ಅಪ್ಪಿಕೊಂಡರಾಗುವುದಕ್ಕಿಂತ ಸುಖಕರವಾದ್ದಾವುದು? ಅಂಥ ಮಗನು ತಾನಾಗಿ ಬಂದು ಸಾಭಿಲಾಷನಾಗಿ ನಿನ್ನ ಎದುರಿಗೆ ನಿಂತಿದ್ದಾನೆ. ಪ್ರಿಯ ದರ್ಶನನಾದ ನಿನ್ನ ಮಗನನ್ನು ಕಂಡೂ ನೀನು ಏಕೆ ನಿರಾಕರಿಸುತ್ತಿರುವೆ? ಎಂದಳು.

ದುಷ್ಯಂತ — ನೀನು ನನ್ನ ಹೆಂಡತಿಯೂ ಅಲ್ಲ; ಈ ಮಗನು ನನ್ನ ಮಗನೂ ಅಲ್ಲ. ಉತ್ತಮ ಕುಲದಲ್ಲಿ ಹುಟ್ಟಿದ ಯಾವ ಹೆಂಗಸು, ಲಜ್ಜೆಯಿಲ್ಲದೆ ಹೀಗೆ ಮಾತನಾಡುತ್ತಾಳೆ? ಹೀನಳಾಗಿ ಹುಟ್ಟಿ ಕುಲೀನಳಂತೆ ಗಳಹುತ್ತಿರುವೆ. ಇಷ್ಟಲ್ಪ ಕಾಲದಲ್ಲಿ ನನ್ನ ಮಗನು ಇಷ್ಟು ದೊಡ್ಡವನಾಗಿ ಹೇಗೆ ಬೆಳೆದಾನು? ನಾನು ನಂಬಲಾರೆ. ನಾನು ನಿನ್ನನ್ನು ಮದುವೆ ಯಾಗಲೂ ಇಲ್ಲ. ಧರ್ಮವನ್ನು ತಪ್ಪಿ ನಿನ್ನನ್ನು ಸ್ವೀಕರಿಸುವವನೂ ಅಲ್ಲ.

ಹೀಗೆಂದು ಅವಳ ತಾಯಿತಂದೆಯರ ನಿಂದೆಯನ್ನು ಮಾಡಿ ಅವಳನ್ನು ಅಸತ್ಯವಾದಿ, ಪುಂಶ್ಚಲಿ ಮುಂತಾಗಿ ಕೀಳು ಮಾತುಗಳನ್ನಾಡಿದನು.

ಶಕುಂತಲೆ — ನಿನ್ನ ಕುಲಕ್ಕಿಂತ ನನ್ನದು ಮೇಲ್ತರದ್ದು. ನೀನು ನೆಲದ ಮೇಲಿನವನು, ಅಂತರಿಕ್ಷದಲ್ಲಿ ಚಲಿಸಬಲ್ಲವಳು ನಾನು; ನಾನು ಅಪ್ಸರೆ, ನೀನು ಮನುಷ್ಯ. ನಾನಲ್ಲ ಕುಲದಲ್ಲಿ ಹೀನಳಾದವಳು. ಆ ಮಾತನ್ನಾಡಬೇಡ. ನಮ್ಮ ಇಬ್ಬರಿಗೂ ಇರುವ ಅಂತರ ಮೇರು ಪರ್ವತಕ್ಕೂ ಸಾಸುವೆಕಾಳಿಗೂ ಇರುವಷ್ಟು ದೊಡ್ಡದು. ಕನ್ನಡಿಯಲ್ಲಿ ತನ್ನ ಮುಖವನ್ನು ನೋಡಿಕೊಳ್ಳದಿರುವವರೆಗೂ ಸುರೂಪಿ ತಾನು, ಇತರರಿಗಿಂತ ಹೆಚ್ಚು ರೂಪವಂತನು ಎಂದುಕೊಳ್ಳುವುದು ಸಹಜ. ಎಲ್ಲ ವೇದಗಳನ್ನೂ ಕಲಿಯಬಹುದು; ಎಲ್ಲ ತೀರ್ಥಗಳಲ್ಲಿ ಮುಳುಗಿ ಮಿಾಯಬಹುದು; ಅವೆಲ್ಲ ಸೇರಿದರೂ ಸತ್ಯವನ್ನು ನುಡಿಯುವುದರಿಂದ ಉಂಟಾಗುವ ಪುಣ್ಯದ ಷೋಡಶಭಾಗದಷ್ಟಾಗುವುದಿಲ್ಲ. ಅನೃತಕ್ಕಿಂತ ತೀವ್ರತರವಾದ ದೋಷವಿಲ್ಲವೆಂದು ನಾನು ತಿಳಿದಿದ್ದೇನೆ. ಸತ್ಯವೇ ಪರಮ ಧರ್ಮವಾದರೆ ಕೊಟ್ಟ ಮಾತಿಗೆ ತಪ್ಪದಿರುವುದು ಅದಕ್ಕಿಂತ ಶ್ರೇಷ್ಠವಾದ್ದು. ಸತ್ಯದೊಡನೆ ನಿನ್ನ ಸಂಗವಿರಲಿ. ನನಗೆ ಕೊಟ್ಟ ಮಾತನ್ನು ನಡಸು. ಹಾಗಲ್ಲದೆ ನನ್ನನ್ನು ನಂಬದೆ ಅಸತ್ಯವನ್ನೇ ಹಿಡಿಯುವೆಯಾದರೆ ಅನೃತವಾದಿಯಾದ ನಿನ್ನಂಥವನ ಸಂಗ ನನಗೂ ಬೇಡ. ನಿನ್ನ ಮಗನಲ್ಲವೆಂದು ಇವನನ್ನು ನೀನು ಬಿಟ್ಟರೂ ಇವನು ಚತುರಂತವಾದ ಈ ಭೂಮಂಡಲವನ್ನು ಆಳಬಲ್ಲವನಾಗುತ್ತಾನೆ. ಹೇಗೆ ಬಂದೆನೋ ಹಾಗೆ ತಿರುಗಿ ಹೋಗುತ್ತೇನೆ

— ಎಂದು ನುಡಿದು ಶಕುಂತಲೆ ನಿಂತುಕೊಂಡಳು. ಆ ಸಮಯದಲ್ಲಿ ಅಂತರಿಕ್ಷದಿಂದ ಅಶರೀರವಾಣಿಯೊಂದು ಅಲ್ಲಿದ್ದ ಋತ್ವಿಕ್, ಪುರೋಹಿತ, ಆಚಾರ್ಯರು, ಮಂತ್ರಿಗಳು ಎಲ್ಲರಿಗೂ ಕೇಳಿಸುವಂತೆ ಹೇಳಿತು:

"ದುಷ್ಯಂತ, ತಾಯಲ್ಲಿ ತಂದೆಯೇ ಮಗನಾಗಿ ಹುಟ್ಟುವನು. ಈ ತಾಯಲ್ಲಿ ನಿನಗೆ ಮಗುವಾಗಿ ಹುಟ್ಟಿದ ಈ ಕುಮಾರನು ನಿನ್ನ ಮಗನು. ಇವನನ್ನು ಕಾಪಾಡು. ಶಕುಂತಲೆ ಹೇಳುವುದೆಲ್ಲ ಸತ್ಯ. ಇವಳನ್ನು ತಿರಸ್ಕರಿಸಬೇಡ. ನಿನ್ನ ಮಗನಾದ ಇವನನ್ನೂ ಭಾರ್ಯೆಯಾದ ಶಕುಂತಲೆಯನ್ನೂ ಸ್ವೀಕರಿಸಿ ಕಾಪಾಡು. ನಮ್ಮ ಮಾತನ್ನು ನೀನು

ನಡಸತಕ್ಕದ್ದು. ಇನ್ನು ಮೇಲೆ ಅವನ ಹೆಸರು ಭರತನೆಂದಾಗಲಿ. ಈ ಭರತನಿಂದ ಭರತಕುಲದ ಕೀರ್ತಿ ಹಬ್ಬುತ್ತದೆ.''

ಈ ವಾಣಿಯನ್ನು ಕೇಳಿದಕೂಡಲೆ ದುಷ್ಯಂತನು ಎದ್ದು ದೇವತೆಗಳಿಗೆ ನಮಿಸಿದನು. ಪುರೋಹಿತರನ್ನೂ ಮಂತ್ರಿಗಳನ್ನೂ ಕುರಿತು, ಮನಸ್ಸಿನಲ್ಲಿ ಉಕ್ಕುತ್ತಿರುವ ಹರ್ಷದಿಂದ ಈ ರೀತಿ ಹೇಳಿದನು:—

"ಈ ದೇವದೂತನ ಮಾತನ್ನು ತಾವೆಲ್ಲ ಕೇಳಿದ್ದೀರಿ. ಇದೆಲ್ಲ ನಿಜವೆಂದು ನನಗೂ ಗೊತ್ತು. ಈತನು ನನ್ನ ಮಗ, ಈಕೆಯನ್ನು ನಾನು ಮದುವೆಯಾದ್ದುಂಟು. ಆದರೆ ಇಷ್ಟು ವರ್ಷಗಳಾದಮೇಲೆ ಈಕೆಯ ಮಾತಷ್ಟನ್ನೇ ನೆಚ್ಚಿ, ಈ ಮಗನನ್ನು ನನ್ನವನೆಂದು ಒಪ್ಪಿದ್ದರೆ, ನನ್ನ ಜನಕ್ಕೆ ಸಂದೇಹ ಉಳಿಯುತ್ತಿತ್ತು. ಇವನ ಕೀರ್ತಿ ಈಗಿನಷ್ಟು ಪೂರ್ತಿಯಾಗಿ ಶುದ್ಧಿಯಾಗುತ್ತಿರಲಿಲ್ಲ; ಜನರ ಶಂಕೆ ನಿವಾರಣೆ ಆಗುತ್ತಿರಲಿಲ್ಲ" ಎಂದನು. ತನ್ನ ಹೆಂಡತಿಯ ಶೋಧನೆ ಪೂರ್ಣವಾಯಿತೆಂದು ತಿಳಿದು ಸರ್ವದಮನನನ್ನು ಮಗನೆಂದು ಸ್ವೀಕರಿಸಿ ಅಪ್ಪಿಕೊಂಡನು. ಅವನ ತಲೆಕೂದಲನ್ನು ನೇವರಿಸುತ್ತಾ ಅದನ್ನು ಮೂಸಿನೋಡಿದನು. ಅತಿಶಯ ಸ್ನೇಹದಿಂದ ಆಲಿಂಗನ ಮಾಡಿಕೊಂಡು ಪುತ್ರಸಂಸ್ಪರ್ಶದಿಂದ ಪರಮ ಸಂತೋಷವನ್ನು ಪಡೆದನು.

ಆ ಬಳಿಕ ತನ್ನ ಭಾರ್ಯೆಯಾದ ಶಕುಂತಲೆಗೆ ಸಮಾಧಾನವನ್ನು ಮಾಡಬೇಕೆಂದು ಈ ನಾಲ್ಕು ಮಾತುಗಳನ್ನಾಡಿದನು:—

"ಹಿಂದೆ ನಮ್ಮಿಬ್ಬರಿಗೂ ಆದ ಸಂಬಂಧ ಜನರೆದುರಿಗೆ ನಡೆಯಲಿಲ್ಲ. ಅದೆಲ್ಲ ಲೋಕದ ಪರೋಕ್ಷದಲ್ಲಿ ನಡೆದದ್ದು. ಈಗ ಪುನಃ ಆಗುತ್ತಿರುವುದು ಅವರ ಎದುರಿಗೆ. ಸ್ತ್ರೀಸಂಬಂಧ ವಿಷಯದಲ್ಲಿ ಈ ಜನಕ್ಕೆ ಶಂಕೆ ಬರುವುದು ಸಹಜ. ಆದ್ದರಿಂದ ಶಂಕೆ ಮುರಿವಹಾಗೆ ಶುದ್ಧಿಮಾಡಬೇಕೆಂದು ಉದ್ದೇಶಪಟ್ಟು ಮಾತ್ರ ನಿನ್ನನ್ನು ನಾನು ಹೀಗೆ ವಿಚಾರಣೆ ಮಾಡಿದ್ದು. ಅದರಿಂದ ಸತ್ಯ ಸ್ಥಾಪಿತವಾಯಿತು. ಈಗ ಈ ಕುಮಾರನು ನನ್ನ ರಾಜ್ಯದ ಯುವರಾಜನಾಗುವನು. ನೀನು ನನ್ನ ಮಹಿಷಿಯಾಗು. ಶುಭೆ, ಕೋಪದಲ್ಲಿ ನೀನು ನನ್ನನ್ನು ಕುರಿತು ಆಡಿದುದನ್ನು ನಾನು ಕಿವಿಯ ಮೇಲೆ

ಹಾಕಿಕೊಳ್ಳುವುದಿಲ್ಲ. ನೀನು ಕೂಡ ನನ್ನ ಮೇಲಿನ ಪ್ರಣಯದಿಂದ ನನ್ನ ದುರ್ವಚನವನ್ನು ಕ್ಷಮಿಸಬೇಕು" ಎಂದ ಆ ರಾಜನ ಮಾತುಗಳಿಂದ ಶಕುಂತಲೆಗೆ ಪ್ರೀತಿಯುಂಟಾಯಿತು. ಆಕೆಗೂ ಮಗನಿಗೂ ಅನ್ನ, ವಸ್ತ್ರ, ಪಾನಗಳನ್ನು ಕೊಟ್ಟು ಅವನು ಉಪಚರಿಸಿದನು. ನಿಂದೆಗೆ ಈಡಾಗದ ಶೀಲವುಳ್ಳ ಆಕೆ ಆ ರಾಜರ್ಷಿಯ ಪಟ್ಟದ ರಾಣಿಯಾಗಲು ಒಪ್ಪಿದಳು. ಭರತನೆಂಬ ಹೆಸರಿಂದ ಕುಮಾರನು ಯುವರಾಜನಾದನು.

ಕೆಲವುಕಾಲ ಕಳೆಯಲು ಭರತನಮೇಲೆ ರಾಜ್ಯಭಾರವನ್ನು ಹಾಕಿ ದುಷ್ಯಂತನು ಧನ್ಯನಂತೆ ತನ್ನ ಬಾಳನ್ನು ಕಳೆದನು. ಮಹೀಪಾಲರನ್ನೆಲ್ಲ ಗೆದ್ದು ವಶಮಾಡಿಕೊಂಡು ಕಾಲಕ್ರಮದಲ್ಲಿ ಭರತನು ಚಕ್ರವರ್ತಿಯಾದನು. ಪ್ರತಾಪಶಾಲಿ ಸಾರ್ವಭೌಮನಾದನು. ಮಹೇಂದ್ರನಂತೆ ಅನೇಕ ಯಜ್ಞಗಳನ್ನು ಮಾಡಿದನು. ವಾಜಿಮೇಧವನ್ನು ಕಣ್ವರ ಸಹಾಯದಿಂದ ನೆರವೇರಿಸಿ ಸಹಸ್ರಪದ್ಮ ದಕ್ಷಿಣೆಯನ್ನು ಅವರಿಗೆ ದಾನಮಾಡಿದನು. ಭರತನಿಂದಲೇ ಭಾರತಕುಲಕ್ಕೆ ಭಾರತೀಕೀರ್ತಿ ಬಂದದ್ದು. ಇವನ ವಂಶಕ್ಕೆ ಭಾರತವೆಂಬ ಹೆಸರು ಸಂದದ್ದು ಇವನಿಂದಲೇ.

## ೪

ಮೇಲೆ ಹೇಳಿದ ಕಥೆ ಚೆಲುವಾದುದೇನೋ ಹೌದು. ಬಹುಕಾಲದಿಂದಲೂ ಹೆಸರಾದುದೂ ಆಗಿದೆ. ಆದರೆ, ಇಂಥ ಕಡೆ ಒಂದು ಪ್ರಶ್ನೆ ಏಳುತ್ತದೆ: ರಾಜನು ನಡೆದುಕೊಂಡದ್ದು, ಮಾಡಿದ್ದು, ಸರಿಯೇ ಎಂದು. ಮಹಾಭಾರತದ ಕಥೆಯಲ್ಲಿ ವಿವರಿಸಿರುವಂತೆ ಅವನು ತಿಳಿದು ತಿಳಿದು ಅನ್ಯಾಯ ಮಾಡುತ್ತಾನೆ. ಅಷ್ಟೇ ಅಲ್ಲ. ಅಯೋಗ್ಯನಂತೆ ನಡೆದುಕೊಳ್ಳುತ್ತಾನೆ. ಇಂಥವರು ಸರಿಯಾಗಿ ಮನುಷ್ಯರೇ ಅಲ್ಲ. ರಾಜರು ಹೇಗಾದಾರು ? ಭರತಚಕ್ರವರ್ತಿಗೆ ತಂದೆಯಾಗುವ ಪುಣ್ಯ ಇಂಥವನಿಗೆ ಬಂತಲ್ಲ ಎನ್ನಿಸುವಷ್ಟು ಹೇಡಿಯಾಗಿಯೂ ಅಸಾಧುವಾಗಿಯೂ ಕಾಣುತ್ತದೆ ಅವನ ನಡತೆ. ಸಕ್ಕರೆಯಂತಹ ಸವಿಮಾತುಗಳನ್ನಾಡಿ,

ಶಕುಂತಲೆಯನ್ನು ನಂಬಿಸಿ ಆಕೆಯನ್ನು ಮದುವೆ ಮಾಡಿಕೊಂಡು, ಆಕೆಗೆ ಮಾತುಕೊಟ್ಟು ತನ್ನ ಊರಿಗೆ ಹಿಂದಿರುಗಿದ ಮೇಲೆ ಅವನಿಗೆ ಉಂಟಾದುದು ಭಯ. ಕಣ್ವ ಋಷಿಗಳು ಆಶ್ರಮದಲ್ಲಿ ಇಲ್ಲದೆ ಇರುವಾಗ ಅರಿಯದ ಹುಡುಗಿ ಅವರ ಸಾಕುಮಗಳನ್ನು ಒಲಿಸಿ ರಹಸ್ಯದಲ್ಲಿ ತನ್ನವಳನ್ನಾಗಿ ಮಾಡಿಕೊಂಡದ್ದನ್ನು ಕೇಳಿ ಅವರು ಏನೆಂದಾರೊ, ಎಷ್ಟು ಕೋಪಿಸಿಕೊಂಡಾರೊ, ಇನ್ನೇನು ಮಾಡಿಬಿಟ್ಟಾರೊ ಎಂಬುದು ಅವನ ಭಯಕ್ಕೆ ಕಾರಣ. ಆದುದರಿಂದಲೇ ಆಶ್ರಮಕ್ಕೆ ತನ್ನ ಜನರನ್ನು ಕಳಿಸಲಿಲ್ಲ. ಶಕುಂತಲೆಯನ್ನು ಮಾತುಕೊಟ್ಟಂತೆ ರಾಜಧಾನಿಗೂ ಅರಮನೆಗೂ ಕರಸಿಕೊಳ್ಳಲಿಲ್ಲ. ದಿನೇ ದಿನೇ ಆ ಯೋಚನೆಯನ್ನು ಮುಂದೆ ಹಾಕಲು ಪ್ರಯತ್ನಪಟ್ಟ. ಮರೆಯಲು ಅಭ್ಯಾಸ ಮಾಡಿದ ಮರೆತೇಬಿಟ್ಟ. ಹಲವು ವರ್ಷಗಳು ಕಳೆದು ಮಗನೊಡನೆ ಶಕುಂತಲೆಯೇ ಅವನನ್ನು ಹುಡುಕಿಕೊಂಡು ಬರಬೇಕಾಯಿತು.

ಅವರು ಎದುರಿಗೆ ಬಂದು ನಿಂತಾಗ ಅವನಿಗೆ ಎಲ್ಲವೂ ನೆನಪಾಯಿತು. ಹಿಂದೆ ನಡೆದ ಸಂಗತಿಯೆಲ್ಲ ಕಣ್ಣ ಮುಂದೆ ಪುನಃ ನಿಂತ ಹಾಗಾಯಿತು. ಆಕೆಯನ್ನೂ ಮಗನನ್ನೂ ನೋಡಿ ಒಳಗೆ ತೃಪ್ತಿಯಾಯಿತು; ಸಂತೋಷವಾಯಿತು. ಆದರೂ ಆಕೆ ಹೇಳಿದುದೆಲ್ಲ ಸುಳ್ಳೆಂದು ವಾದಿಸಿದ. ಸಭ್ಯನಾದವನು ಆಡಬಾರದ ಮಾತುಗಳನ್ನಾಡಿದ. ತಾನು ದುರ್ಜನನಾಗಿರುವಾಗ, ಆಕೆಯನ್ನು ಜರಿದುದಲ್ಲದೆ ಆಕೆಯ ತಂದೆ ವಿಶ್ವಾಮಿತ್ರನನ್ನೂ ತಾಯಿ ಮೇನಕೆಯನ್ನೂ ಕೆಟ್ಟ ಹೆಸರುಗಳಿಟ್ಟು ಕರೆದ. ನಿಸ್ಸಹಾಯಳಾದ ಹೆಂಗಸನ್ನು ಅಲ್ಲಸಲ್ಲದ ಹೀನಾಯಕ್ಕೆ ಗುರಿಮಾಡಿದ. ಅವಳ ಶುದ್ಧಿಗಾಗಿ ಹಾಗೆ ಮಾಡಿದನಂತೆ! ಅಂಗಾಂಗದಲ್ಲಿಯೂ ತನ್ನ ಅಚ್ಚಿನಂತೆ ಇದ್ದ ಮಗನು ಎದುರಿಗೆ ಇರುವಾಗ ತನ್ನ ಮನಸ್ಸೇ ಪ್ರಮಾಣವಾಗಿ ಒಳಗೆ ಒಪ್ಪಿಕೊಂಡಿರುವಾಗ, ಆ ಮಗನನ್ನು ನಿರಾಕರಿಸಿದ. ತಾಪಸಿಯ ವೇಷವನ್ನು ಧರಿಸಿದ ವಂಚಕಳು ಶಕುಂತಲೆ, ಇಷ್ಟು ದಢೂವತ್ತಾದ ಮಗ ತನ್ನವನು ಹೇಗಾದಾನು ಎಂಬವರೆಗೆ ಸಿಲುಕಿತು ಅವನ ಆಕ್ಷೇಪಣೆ. ಈ ಬಾಲಕನು ಅತಿಕಾಯನು, ಇಷ್ಟಲ್ಪ ಕಾಲದಲ್ಲಿ ನಿನ್ನ ನನ್ನ ಮಗನು ಶಾಲಸ್ಕಂಧದಂತೆ ಬೆಳೆದುದು ಹೇಗೆ? ನೀನು ಯಾವಳೋ

ಕೀಳು ಹೆಣ್ಣಿರಬೇಕು – ಎಂಬಂತಹ ಮಾತುಗಳನ್ನಾಡುವಷ್ಟು ನಾಲಿಗೆ ನಿಡಿದಾಯಿತು. ಅರಿಯದೆ ಆಡಿದ್ದರೆ ಅಜ್ಞಾನವೆನ್ನಬಹುದಾಗಿತ್ತು. ಆತ್ಮ ಸಾಕ್ಷಿಇವನು ತನ್ನ ಮಗನೇ ನಿಜ ಎಂದು ಹೇಳುತ್ತಿರಲು ಇಂಥ ಮಾತು ಸರ್ವಥಾ ದುಷ್ಟವಾಗುವುದು. ಇದು ಅಧರ್ಮವಲ್ಲದೆ ಬೇರೆಯಲ್ಲ. ಸತ್ಯದ ವಿಚಾರದಲ್ಲಿ, ಧರ್ಮವನ್ನು ಒಡಿದು ಶಕುಂತಲೆ ಆಡಿದ ಮಾತುಗಳು ನ್ಯಾಯ ವಾದವು. ಬಡವೆಯಾದ, ಆ ಸ್ಥಿತಿಯಲ್ಲಿ ಇದ್ದ ಹೆಂಗಸು ಬೇರೆ ಏನು ಮಾಡಿಯಾಳು ? ರಾಜನು ಧರ್ಮಪ್ರಭು ; ತುಂಬಿದ ಸಭೆಯಲ್ಲಿ ತಾನು ಕೈ ಹಿಡಿದು ನಂಬಿಸಿದ್ದ ಹೆಂಡತಿಯನ್ನು ಕುರಿತು ಹೀನ ಮಾನದ ಆ ಮಾತು ಗಳನ್ನು ಆಡಿದರೆ ಆಕೆಗೆ ಇನ್ನೇನು ಗತಿ ? ಹೆಂಗಸಾದವಳಿಗೆ ಬೇರೆ ದಿಕ್ಕಿಲ್ಲ. ರಾಜನಿಗೇನೊ ತನ್ನ ಮಾನವನ್ನೂ ಜನಗಳಲ್ಲಿ ತನ್ನ ಮರ್ಯಾದೆಯನ್ನೂ ಉಳಿಸಿಕೊಳ್ಳಬೇಕು ಎಂಬ ಯೋಚನೆ ಸರಿಯೇ ಹೌದು. ಏಕಾಂತದಲ್ಲಿ ನಡೆದಿದ್ದ ಸಂಗತಿಯನ್ನು ಬಹು ವರ್ಷಗಳವರೆಗೂ ಬಚ್ಚಿಟ್ಟು ಇದ್ದಕ್ಕಿದ್ದ ಹಾಗೆ ಯಾವಳೋ ಚೆಲುವೆ ಹೆಂಗಸು ಬಂದು ನುಡಿದ ಕೂಡಲೆ ಒಂಬತ್ತು ವರ್ಷಗಳು ಕಳೆದ ಮೇಲೆ ಆಕೆ ತನ್ನ ಹೆಂಡತಿ ಎಂದೂ ಎಲ್ಲಿಯೋ ಹುಟ್ಟಿ ಬೆಳೆದ ಮಗ ತನ್ನ ಹೊಟ್ಟೆಯ ಮಗ ಎಂದೂ ಒಡನೆಯೇ ಒಪ್ಪಿಕೊಳ್ಳುವುದು ಅಲೌಕಿಕವಾಗಿ ಕಾಣುತ್ತದೆ. ಈ ಕಾರಣಗಳಿಂದ ಹೀಗೆ ಬಂದ ಹೆಂಗಸಿನ ಕೈಯನ್ನು ಹಿಡಿಯುವುದು ಹೇಗೆ ಉಚಿತವಾದೀತು? ಎನ್ನಬಹುದು. ಅವನೇ ಕಡೆಯಲ್ಲಿ ಹೀಗೆ ಸಮಾಧಾನ ಮಾಡಲು ಯತ್ನಿಸಿದ್ದಾನೆ. ಎಲ್ಲ ನಡತೆಗೂ ಯುಕ್ತಿ ಹೇಳಿ ಅದರ ಪರವಾಗಿ ಒಂದು ಮಾತನ್ನು ಆಡಿ ವಿಷ ಮುರಿಯುವಂತೆ ಮಾಡಿಕೊಳ್ಳಬಹುದು. ಆದರೆ ಸಭ್ಯತೆಯೆಂಬು ದೊಂದಿಲ್ಲವೆ ? ಮಾತಿಗೆ ಮಿತಿ ಬೇಡವೆ ? ಬೀದಿಯ ದೇಸಿಗರೂ ಇಂತಹ ಕೊಳೆಮಾತುಗಳನ್ನು ಆಡಬಾರದು.

ಹಿರಿಯರ ಒಪ್ಪಿಕೆ ಇಲ್ಲದೆ ಏಕಾಂತದಲ್ಲಿ ಗಂಡಸು ಹೆಂಗಸು ಈ ರೀತಿ ಸೇರುವುದೂ ನಡೆದುಕೊಳ್ಳುವುದೂ ಸಮಾಜ ಹಿತಕ್ಕೆ ವಿರೋಧ. ಇಂತಹ ಸಂದರ್ಭದಲ್ಲಿ ತಪ್ಪು ಗಂಡಸರದೂ ಹೆಂಗಸರದೂ ಇಬ್ಬರದೂ ಆಗುತ್ತದೆ. ಕೆಡುವುದೆಂದರೆ ಒಬ್ಬರಿಂದ ಒಬ್ಬರು, ಇಬ್ಬರೂ ಕೆಡುತ್ತಾರೆ. ತಪ್ಪಾದರೆ

ಆ ತಪ್ಪಿಗೆ ಇಬ್ಬರೂ ಸಮವಾಗಿ ಹೊಣೆಗಾರರು. ಶಕ್ತನಾದ, ಧರ್ಮಿಷ್ಠನಾದ, ನಾಡಿನ ರಾಜನಾದ ದುಷ್ಯಂತನಿಗೆ ಧರ್ಮ ತಿಳಿಯದೆಂದರೆ ಇನ್ನಾರಿಗೆ ತಿಳಿಯಬೇಕು? ಅವನು ಧರ್ಮವನ್ನು ನಡಸದಿದ್ದರೆ ಇನ್ನಾರು ನಡಸಿ ಯಾರು? ಇಂಥವರಿಗೆ ಮಂತ್ರ ಹೇಳುವ ಒಬ್ಬರು ಬೇಡವೆ ಸಭೆಗಳಲ್ಲಿ?

ಅದು ಹೋಗಲಿ. ಕಡೆಯದಾಗಿ ದಿಕ್ಕೆಟ್ಟು ಶಕುಂತಲೆ ಸಭೆಯಿಂದ ಹೊರಟುಹೋಗಬೇಕಾಗಿ ಬರಲು ಆಕೆಯನ್ನು ಕಾಪಾಡುವಂತಹ ಮಾತುಗಳನ್ನು ದೇವತೆಗಳು ನುಡಿಯದೆ ಇದ್ದಿದ್ದರೆ ಅವಳ ಗತಿ ಏನಾಗಬೇಕು? ಹೆಂಗಸು ಕಾಡುಪಾಲಾಗುತ್ತಿದ್ದಳು. ಅನ್ಯಾಯವೂ ಧರ್ಮದ್ರೋಹವೂ ಆಗುತ್ತಿದ್ದವು. ಮನುಷ್ಯನು ದುಷ್ಟನಾಗಿ ಯುಕ್ತ, ಅಯುಕ್ತ ಯೋಚನೆ ಮಾಡದೆ, ಧರ್ಮವನ್ನು ನಡಸದೆ ತಾನಾಗಿ ಮೋಹಿಸಿ ಈ ಸ್ಥಿತಿಗೆ ತಂದ ಹೆಣ್ಣಿನ ಮಾನವನ್ನು ದೇವತೆಗಳು ಕಾಪಾಡದೆ ಇದ್ದರೆ ಆಕೆಗೆ ಭೂಮಿಯ ಮೇಲೆ ಸಹಾಯ ಬೇರಾರೂ ಇಲ್ಲ. ಸಮಾಜ, ನಿಜವನ್ನು ತಿಳಿಯದಿರುವಾಗ ರಾಜನ ನಡತೆಯನ್ನು ಒಪ್ಪಿತು. ನಿಜ ತಿಳಿದಾಗ ಕೂಡ ಹಲವೇಳೆ ರಾಜನ ಮಾತಿನ ಮೇಲೆ ಏನನ್ನೂ ಧೈರ್ಯವಾಗಿ ಆಡದು. ಹೀಗಿರುವಾಗ ಧರ್ಮವನ್ನು ಕಾಪಾಡುವ ದೇವತೆಗಳು ಮಾತ್ರ ಮನುಷ್ಯನಿಗೆ ಸಹಾಯ ಮಾಡಬೇಕು, ಇನ್ನಾವ ಸಹಾಯವೂ ಇಲ್ಲ – ಎಂಬುದನ್ನು ಈ ಕಥೆಯಲ್ಲಿ ನಾವು ಕಾಣಬಹುದು. ಶಕ್ತನಾದ ಗಂಡಸು ಹೇಗೋ ಇಂಥ ಅನ್ಯಾಯವನ್ನು ಅಡಗಿಸಿ ಮರೆಮಾಡಿಬಿಡಲೂ ಜೀರ್ಣ ಮಾಡಿ ಕೊಳ್ಳಲೂ ಪ್ರಯತ್ನ ಪಡುವನು. ಅರಿಯದ, ನಿಸ್ಸಹಾಯಳಾದ ಹೆಂಗಸಿಗೆ ಸಮಾಜದಲ್ಲಿ ಎಷ್ಟು ಕಷ್ಟವಾಗಬಹುದೆಂಬುದನ್ನು ಯೋಚಿಸಬೇಕು. ತಾವು ತಮ್ಮ ಧರ್ಮ ಸತ್ಯಗಳಲ್ಲಿದ್ದರೆ ದೇವತೆಗಳ ಸಹಾಯ ಖಂಡಿತವಾಗಿ ದೊರೆಯುವುದೆಂಬುದು ಆ ಕಾಲದವರ ವಿಶ್ವಾಸ; ಧರ್ಮದ ಸಮಯ. ಅದಕ್ಕೆ ತಕ್ಕಂತೆ ಇಲ್ಲಿ ಸುಖಾಂತವಾಗುತ್ತದೆ ಕಥೆ. ಈ ಶಕುಂತಲೆಯನ್ನು ಗಟ್ಟಿಗಿತ್ತಿ, ವ್ಯಾಪಾರ, ಪಂಚಾಯಿತಿ, ರಂಪು ಮಾಡುವವಳು ಎನ್ನುವವ ರಿದ್ದಾರೆ. ತನ್ನ ಮಾನಕ್ಕೆ ಧಕ್ಕೆ ಬಂದಾಗ ತನ್ನ ಪರವಾಗಿ ದೃಢವಾಗಿ ತಾನು ನಡೆಯದಿದ್ದರೆ ಅವಳ ಕಡೆಗೆ ಇನ್ನಾರು ಬಂದಾರು? ಇಲ್ಲಿ

ಅಪರಾಧ ಪೂರ್ತಿ ದುಷ್ಯಂತನದು. ಅವನದನ್ನು ಕ್ಷಮಿಸುವುದು ಕೂಡ ಕಷ್ಟ.

ಈ ಕಷ್ಟ ಅಂದು ಹೇಗೆ ಒದಗಿತೋ ಇಂದೂ ಹಾಗೆಯೇ ಒದಗುತ್ತಿದೆ. ದೇವತೆಗಳು ಸಾಕ್ಷಿ ಹೇಳುತ್ತಾರೆ, ಧರ್ಮಿಷ್ಠರ ಧರ್ಮ ಅವರನ್ನು ಕಾಪಾಡುತ್ತದೆ ಎಂಬ ನಂಬಿಕೆ ಆಗ ಜನಕ್ಕೆ ಇತ್ತು. ಇಂದು ಅಂತಹ ಪ್ರತ್ಯಕ್ಷವನ್ನು ದೇವತೆಗಳು ನೇರವಾಗಿ ತೋರಿಸುತ್ತಿಲ್ಲ. ಮನುಷ್ಯನು ಮನುಷ್ಯರ ವಿಷಯದಲ್ಲಿ ದೇವತೆಗಳಂತೆ ನಡೆದುಕೊಂಡ ಹೊರತು ಇಂಥ ಅನ್ಯಾಯಗಳಿಗೆ ಯಾವ ತಡೆಗಳೂ ಉಂಟಾಗುವುದಿಲ್ಲ. ಪ್ರೀತಿಯೊಂದು ಸಾಕು. ದಾಂಪತ್ಯಕ್ಕೆ ಇನ್ನಾವ ಪ್ರಮಾಣ, ಸಾಕ್ಷಿ ಬೇಕು ? ಎಂದು ಭಾವದ ಮಾತುಗಳನ್ನಾಡುವ ಪ್ರಿಯವಾದಿಗಳು ಇಂದು ಬಹುಜನವಾಗುತ್ತಿದ್ದಾರೆ. ಯಾರು ಕಾಣಲಿ ಯಾರು ಕಾಣದಿರಲಿ ಇಬ್ಬರೂ ನಿಷ್ಠೆಯಿಂದ ಪರಸ್ಪರವಾಗಿ ವರ್ತಿಸುವಂತಿದ್ದರೆ ಮಾತ್ರ ಈ ಚಾರುವಾಕವೂ ಧಾರಾಳವೂ ಸರಿ.ಆ ಧರ್ಮವಿಲ್ಲದ ಕಡೆ ಬದುಕು ಕಷ್ಟಕ್ಕೀಡಾಗಿ ಹೆಣ್ಣಿಗೆ ತುಂಬಾ ತೊಂದರೆಯಾಗುತ್ತದೆ. ಇಂಥ ಪ್ರಸಂಗಗಳಲ್ಲಿ ಸಾಕ್ಷಿ ಇರಲೆಂದೇ ವಿವಾಹ, ವಿಧಿ, ನಾಲ್ಕು ಜನರೆದುರಿಗೆ ಪ್ರಕಟವಾಗಿ ಮಂಗಳಕಾರ್ಯಾಚರಣೆ ನಡೆಯತಕ್ಕದ್ದು ಎಂದು ಸಮಾಜ ಏರ್ಪಡಿಸಿರುವುದು. ಕಾನೂನಿರುವುದು ನ್ಯಾಯವಾಗಿ ನಡೆಯುವವರಿಗೆ ಸಹಾಯವಾಗಬೇಕೆಂದು ; ಅದಕ್ಕಿಂತ ಹೆಚ್ಚಾಗಿ ಅನ್ಯಾಯವಾಗಿ ನಡೆಯುವವರಿಂದ ಆಗುವ ಕೇಡನ್ನು ತಪ್ಪಿಸುವುದಕ್ಕಾಗಿ. ಅರಿಯದವರ ರಕ್ಷಣೆಗಾಗಿ.

ಸಮಾಜ ವ್ಯವಸ್ಥೆ ಸಹಾಯಕವಾಗದಿದ್ದರೆ ಎಲ್ಲ ರೀತಿಯಿಂದಲೂ ಪ್ರೀತಿಗೆ ಯೋಗ್ಯರಾದವರು ತಬ್ಬಲಿಗಳಾಗುತ್ತಾರೆ. ಅಷ್ಟೇ ಅಲ್ಲ. ಅಂಥವರನ್ನು ಕಂಡರೆ ಜನರಲ್ಲಿ ಅಪವಾದ ಉಂಟಾಗಿ ಅವರ ಬಾಳು ದುಃಸಹವಾಗುತ್ತದೆ. ಅಂಥವರನ್ನು ಕುರಿತು ಹೀನವಾಗಿ ಜನ ಮಾತನಾಡಿ ನಡೆಯಬಾರದ ರೀತಿಯಲ್ಲಿ ನಡೆದುಕೊಳ್ಳುತ್ತಾರೆ. ಹುಟ್ಟಿದ ಮಕ್ಕಳ ಪಾಡಂತೂ ನಾಯಿ ಪಾಡು. ಸಮಾಜ ಎಂದಿಗೆ ಕರುಣೆಯುಳ್ಳದ್ದಾಗುತ್ತದೆಯೋ ಅಂದು ಇಂತಹ ಸ್ಥಿತಿಯನ್ನು ಕಂಡಾಗ ಅದಕ್ಕೆ ದುಷ್ಟರ

ಪರವಾಗಿ ಆಗ್ರಹವೂ ದುರ್ಬಲರ ಪರವಾಗಿ ಸಹನೆಯೂ ಬರುತ್ತವೆ. ಶಕುಂತಲೆಯಂಥವರನ್ನು ಕಂಡು ಕನಿಕರ ಉಂಟಾಗುತ್ತದೆ. ಜನ ಅಂಥವರನ್ನು ಕ್ಷಮಿಸಿ ಕಾಪಾಡುತ್ತಾರೆ. ದುಷ್ಯಂತನಂಥವರನ್ನು ಎದುರಿಸಿ ಸಮಾಜ ಬುದ್ಧಿ ಕಲಿಸುತ್ತದೆ. ಎಂದರೆ, ಅದಕ್ಕೆ ಆಗ ದೇವರಂತೆ ನಡೆಯತಕ್ಕ ಒಂದು ಯೋಗ್ಯತೆಯೂ ಅಧಿಕಾರವೂ ಬರುತ್ತವೆ. ಶಕುಂತಲೆಯ ಸ್ಥಿತಿ ಯಾವ ಹೆಣ್ಣಿಗೂ ಬೇಡ. ದುಷ್ಯಂತನು ನಡೆದಂತಹ ಅಪ್ರಾಮಾಣಿಕ ನಡತೆ ಯಾವ ಗಂಡಸಿಗೂ ಬೇಡ, – ಎಂದು ಯಾವಾಗ ಒಂದು ಕ್ಷಣ ಮಾತ್ರವಾದರೂ ನಾವು ಯೋಚಿಸುತ್ತೇವೆಯೋ ಆಗ ನಮ್ಮ ಬುದ್ಧಿ, ಮನಸ್ಸು, ಶುಚಿಯಾಗಿ, ನಾವು ನಿಜವಾಗಿ ಸಭ್ಯರಾಗುತ್ತೇವೆ; ನಾಗರಿಕರಾಗುತ್ತೇವೆ. ನಮ್ಮ ಸಮಾಜ ಒಂದು ಮೆಟ್ಟಲು ಮೇಲಕ್ಕೆ ಏಳುತ್ತದೆ.

---

# ಸಾವಿತ್ರಿ

ಹುಟ್ಟಿದಂದಿನಿಂದ ಕಡೆಯುವರೆಗೂ ಪಾಂಡವರಿಗೆ ಕಷ್ಟಜೀವನವೇ ಆಯಿತು. ಅದರಲ್ಲಿಯೂ ಅವರು ಈ ಹನ್ನೆರಡು ವರ್ಷಗಳ ಕಾಲ ಕಾಡಿಂದ ಕಾಡಿಗೆ ಸುತ್ತಿ ಗಾಸಿಪಟ್ಟರು. ಕಾಡಿನಲ್ಲಿ ಸಾಮಾನ್ಯವಾಗಿ ಒದಗಬಹುದಾದ ಕ್ಲೇಶಗಳು ಮಾತ್ರವಲ್ಲ; ದಾಯಾದಿಯಾದ ದುರ್ಯೋಧನನು ಹಲವು ಬಗೆಯ ಕಿರುಕುಳ ಕೊಟ್ಟು ಅವರಿಗೆ ಕಷ್ಟ, ನಷ್ಟ, ಅವಮಾನ ಉಂಟು ಮಾಡಿದನು. ಅದರಿಂದ ಪಾಂಡವರು ಅತಿಯಾಗಿ ನೊಂದರು. ಆದರೆ ಅವರ ಧರ್ಮಶ್ರದ್ಧೆ, ಧೈರ್ಯ ಸ್ವಲ್ಪವೂ ಕುಂದಲಿಲ್ಲ.

ಅವರೂ ಎಲ್ಲರಂತೆ ಮನುಷ್ಯರಾದ್ದರಿಂದ ಆಗಾಗ ತಮ್ಮ ದುರ್ಗತಿಗೆ ಖಿನ್ನರಾಗುತ್ತಿದ್ದುದುಂಟು. ಒಬ್ಬೊಬ್ಬರ ಮನಸ್ಸು ಒಂದೊಂದು ರೀತಿ ಕುದಿಯಿತು. ಕಿರಿಯರು ಮುಯ್ಯಿನ ಅಥವಾ ಬೇರೆಯ ಕಲ್ಪನೆಗಳಲ್ಲಿ ಮುಳುಗಿದ್ದರೂ ಹಿರಿಯನಾದ ಯುಧಿಷ್ಠಿರನ ಗುಣಕ್ಕೂ ಪ್ರೀತಿಗೂ ಕಟ್ಟುಬಿದ್ದು ಅವನಿಗೆ ವಿಧೇಯರಾಗಿ ಕಷ್ಟನಿಷ್ಠುರಗಳನ್ನು ಸಹಿಸಿಕೊಂಡರು; ಮರೆತುಕೊಳ್ಳುತ್ತಿದ್ದರು. ಇದನ್ನೆಲ್ಲ ನೋಡಬೇಕಾಗಿದ್ದ ಯುಧಿಷ್ಠಿರನಿಗೆ ತನ್ನ ಹೊಣೆ ಬಹು ದೊಡ್ಡದಾಗಿ ಕಾಣಿಸಿರಬೇಕು. ಆತನ ಚಪಲದಿಂದಲೇ, ದೌರ್ಬಲ್ಯದಿಂದಲೇ ಪಗಡೆಯಾಟ ನಡೆದದ್ದು. ಆತನೇ ಎಲ್ಲ ಸಂಪತ್ತನ್ನೂ ಆಟದಲ್ಲಿ ಒಡ್ಡಿ ಬುದ್ಧಿಗೆಟ್ಟು ಕಡೆಗೆ ತಮ್ಮಂದಿರನ್ನೂ ತನ್ನನ್ನೂ ಕೈ ಹಿಡಿದ ಹೆಂಡತಿ ದ್ರೌಪದಿಯನ್ನೂ ದಾಳದ ಗರಕ್ಕೆ ಈಡುಮಾಡಿದುದು. ಅದೃಷ್ಟ ಇವರಿಗೆ ವಿರೋಧವಾಯಿತು. ಶಕುನಿಯ ನಿಪುಣತೆಯಿಂದಾಗಿ ದಾಯಾದಿಗಳಿಗೆ ಆತನೇ ಸಮಸ್ತವನ್ನೂ ಸೋತದ್ದು. ಕಡೆಯಲ್ಲಿ ಇವರಿಗೆ ದಾಯಾದಿಗಳ ನಿರ್ಬಂಧದಿಂದ ಬಿಡುಗಡೆಯಾಗುವುದು ದುರ್ಘಟವಾಯಿತು. ದ್ರೌಪದಿಯನ್ನು ಸಭೆಗೆ ಎಳೆತಂದ ದುರ್ನಯದ ಫಲವಾಗಿ ದುಶ್ಶಕುನಗಳಾಗಲು ಹಗೆಗಳು ಹೆದರಿದರು. ಧೃತರಾಷ್ಟ್ರನು ಆಕೆಗೆ ವರದಾನ ಮಾಡಿದನು.

ಒಡಲೊರಸೆ ಇವರು ಹಸ್ತಿನಪುರದಿಂದ ಹೊರಟುಬರಲು ಶಕ್ಯವಾದುದು ದ್ರೌಪದಿಗೆ ಧೃತರಾಷ್ಟ್ರನು ಕೊಟ್ಟ ವರಗಳ ಬಲದಿಂದ; ಆಕೆ ಅವನಿಗೆ ಮಾಡಿದ ಪ್ರಾರ್ಥನೆಯಿಂದ.

ದ್ರೌಪದಿ ಅಗ್ನಿಯಲ್ಲಿ ಹುಟ್ಟಿದವಳು; ದ್ರುಪದನು ಸಾಕಿದ ಮಗಳು; ರೂಪವತಿ, ಗುಣವತಿ. ಭರತಖಂಡದ ಇತರ ಕ್ಷತ್ರಿಯರಾರಿಗೂ ಶಕ್ಯವಾಗದಂತಹ ಸಂದರ್ಭದಲ್ಲಿ ಅರ್ಜುನನಿಗೆ ಬಿಲ್ಗಾರಿಕೆಯ ಫಲವಾಗಿ ವೀರಪತ್ನಿಯಾಗಿ ದೊರೆತವಳು. ಆಕೆ ಐವರು ಮಹಾವೀರರ ಮಡದಿಯಾಗಿ ಶಕ್ತಿ, ಗುಣ, ತೇಜಸ್ಸು, ಧರ್ಮಬುದ್ಧಿ ಎಲ್ಲದರಲ್ಲಿಯೂ ಕೀರ್ತಿವಂತರಾದ ಈ ಪಾಂಡವರಿಂದ ಮಾನ್ಯಳಾದವಳು. ಅವರು ರಾಜಸೂಯ ಯಾಗವನ್ನು ನೆರವೇರಿಸಿದಾಗ ಯಜ್ಞದ ಯಜಮಾನನಾದ ಯುಧಿಷ್ಠಿರನ ಜೊತೆಯಲ್ಲಿ ಕುಳಿತು ಚಕ್ರವರ್ತಿನಿಯಂತೆ ಅಭಿಷೇಕ ಮಾಡಿಸಿಕೊಂಡವಳು. ಶ್ರೀ ಕೃಷ್ಣನು ತಂಗಿಯೆಂದು ಆಕೆಗೆ ಗೌರವ ಕೊಟ್ಟನು. ಆಕೆಯ ಪ್ರಭಾವ ಎಲ್ಲರಮೇಲೂ ಆಧಿಪತ್ಯ ಮಾಡುತ್ತಿತ್ತೆಂಬುದನ್ನು ಮಹಾಭಾರತವನ್ನು ಓದಿದವರೆಲ್ಲ ಬಲ್ಲರು. ಇಂಥ ಮಾನಿನಿಯನ್ನು ಗಂಡಂದಿರು ಮನೆಯಲ್ಲಿಲ್ಲದ ವೇಳೆಯಲ್ಲಿ ಧೃತರಾಷ್ಟ್ರನ ಅಳಿಯನಾದ ಜಯದ್ರಥನು ಅಪಹರಿಸಿಕೊಂಡು ಹೋಗಲು ಯತ್ನಿಸಿ ವಿಫಲನಾಗಿ ಪೆಟ್ಟುತಿಂದ ಕಥೆ ಪ್ರಸಿದ್ಧವಾಗಿದೆ. ತನಗೆ ದಕ್ಕುವ ಪದಾರ್ಥವಲ್ಲ ದ್ರೌಪದಿ ಎಂಬುದು ಆ ಧೂರ್ತ ಸೈಂಧವನಿಗೆ ತಿಳಿಯಲಿಲ್ಲ.

ಈ ದಸ್ಯುಕಾರ್ಯ ನಡೆದು ಹೆಚ್ಚುಕಾಲ ಆಗಿರಲಿಲ್ಲ. ಒಂದು ದಿನ ಇದನ್ನೆಲ್ಲ ಚಿಂತಿಸುತ್ತ ಯುಧಿಷ್ಠಿರನು ಅಧೀರನಾಗಿ ಕುಳಿತಿರುವನು. ಮಾರ್ಕಂಡೇಯ ಋಷಿ ಆತನಿಗೆ ಹಲವು ಬಗೆಯಾಗಿ ಸಮಾಧಾನ ಮಾಡುತ್ತ, ಹಿಂದೆ ಬದುಕಿ ಅಮರರಾದ ಮಹನೀಯರ ಕಥೆಗಳನ್ನು ಹೇಳುತ್ತ, ಸಮಯಕ್ಕೆ ತಕ್ಕ ಧರ್ಮೋಪದೇಶ ಮಾಡುತ್ತ ಇರುವನು. ಆ ಕಥೆಗಳಲ್ಲಿ ಸಾವಿತ್ರಿಗೆ ಸಂಬಂಧಿಸಿದ ಕಥೆ ಒಂದು. ಧರ್ಮಾತ್ಮರಾದ ಜನ ಕಷ್ಟ ಕಾರ್ಪಣ್ಯಗಳಿಗೆ ಸಿಕ್ಕಿದರೂ ತಮ್ಮ ಶೀಲಶುದ್ಧಿಯಿಂದಲೂ ನಿಷ್ಠೆಯಿಂದಲೂ ಹೇಗೆ ಎಂದಿಗೂ ಅಳಿಯದ ಕೀರ್ತಿಯನ್ನು ಪಡೆವರು, ಈ ಲೋಕದಲ್ಲಿ ಕೂಡ ಸತ್ಫಲಗಳನ್ನು ಪಡೆವರು ಎಂಬುದಕ್ಕೆ ಇದೂ ಒಂದು

ನಿದರ್ಶನ. ಯುಧಿಷ್ಠಿರನ ಮಾತು ಈ ಉಪಾಖ್ಯಾನದಲ್ಲಿ ಹೀಗೆ ಮೊದಲಾಗುತ್ತದೆ: –

ಯುಧಿಷ್ಠಿರ – ನನಗಾಗಲಿ ನನ್ನ ತಮ್ಮಂದಿರಿಗಾಗಲಿ ಕಷ್ಟ ಬಂದಿತೆಂದು ನಾನು ಶೋಕಪಡುತ್ತಿಲ್ಲ. ಹಗೆಗಳು ರಾಜ್ಯವನ್ನು ಹರಣ ಮಾಡಿದರೆಂದು ವ್ಯಥೆಯಿಲ್ಲ. ದ್ರೌಪದಿಗೆ ಈ ಕಷ್ಟ ಬಂದುದು ನನ್ನನ್ನು ಶೋಕಗೊಳಿಸಿದೆ. ದುರಾತ್ಮರಾದ ಅವರು ದ್ಯೂತಕಾರಣದಿಂದ ಬಹು ಕಷ್ಟಗಳಿಗೆ ನಮ್ಮನ್ನು ಈಡು ಮಾಡಿದರು. ಅವುಗಳಿಂದೆಲ್ಲ ನಮ್ಮನ್ನು ಪಾರು ಮಾಡಿದವಳು ದ್ರೌಪದಿ. ಅಂಥ ಆಕೆಯನ್ನು, ನಾವು ಎದುರಿಗೆ ಇಲ್ಲದಿರುವಾಗ, ಬಲಪ್ರಕಾಶ ಮಾಡಿ ಜಯದ್ರಥನು ಅಪಹಾರ ಮಾಡಿದನಲ್ಲವೇ. ಪತಿವ್ರತೆಯಾಗಿ, ಸೀಮಂತಿನಿಯರಾಗಿ, ಮಹಾತ್ಮಳಾದ ದ್ರೌಪದಿಯಂಥವಳು ಹಿಂದೆ ಎಂದಾಗಲಿ ಇಷ್ಟು ಕಷ್ಟಕ್ಕೆ ಈಡಾದ್ದನ್ನು ತಾವು ಕಂಡು ಉಂಟೆ? ಕೇಳಿ ಉಂಟೆ?

ಮಾರ್ಕಂಡೇಯ – ಕುಲಸ್ತ್ರೀಯರ ಮಹಾಭಾಗ್ಯ ಎಂಥದೆಂಬುದನ್ನು ನಿನಗೆ ತಿಳಿಸುತ್ತೇನೆ ಕೇಳು, ಯುಧಿಷ್ಠಿರ

– ಎಂದು ರಾಜಕನ್ಯೆಯಾದ ಸಾವಿತ್ರಿಯ ಕಥೆಯನ್ನು ರಾಜನಿಗೆ ವಿವರಿಸುವನು. ಹಿನ್ನೆಲೆ ಇದು.

## ೧

ಮದ್ರವೆಂಬುದೊಂದು ದೇಶ. (ಸುಮಾರು ಇಂದಿನ ಲಾಹೋರ್, ಜಮ್ಮು ಪ್ರಾಂತ ಭಾಗ.) ಅದರ ರಾಜನು ಪರಮ ಧಾರ್ಮಿಕನು; ಸತ್ಯಸಂಧನು; ಜಿತೇಂದ್ರಿಯನು; ದಾನಿ; ದಕ್ಷನು; ಪೌರಜಾನಪದಪ್ರಿಯನು. ಎಲ್ಲ ಪ್ರಾಣಿಗಳ ಹಿತದಲ್ಲಿಯೂ ಪ್ರೀತಿಯುಳ್ಳ ಆತನ ಹೆಸರು ಅಶ್ವಪತಿಯೆಂದು. ಆತನು ಕ್ಷಮಾವಂತ. ಬಹು ಕಾಲ ಕಳೆದರೂ ಮಕ್ಕಳಾಗಲಿಲ್ಲವೆಂದು ಆತನಿಗೆ ಕೊರತೆ. ಮಕ್ಕಳಿಲ್ಲದವರಿಗೆ ಸದ್ಗತಿಯಿಲ್ಲವೆಂದು ಕೇಳಿದ್ದನಾದ್ದರಿಂದ ಬಹುವಾಗಿ ಸಂತಾಪಗೊಂಡನು. ಸಾವಿತ್ರೀ

ಸೇವಿಯನ್ನು ಕುರಿತು ನಿಷ್ಠೆಯಿಂದ ಹದಿನೆಂಟು ವರ್ಷಗಳ ಕಾಲ ನಿತ್ಯವೂ ಹತ್ತು ಸಾವಿರ ಸಾವಿತ್ರೀ ಹೋಮ ಮಾಡುವ ನಿಯಮ ಹಿಡಿದು ಆರಾಧನೆ ಮಾಡಿದನು. ಸಾವಿತ್ರೀ ದೇವಿಗೆ ಸಂತೋಷವುಂಟಾಗಿ ಆತನು ನಡಸುತ್ತಿದ್ದ ಅಗ್ನಿಹೋತ್ರದಿಂದೆದ್ದು ಆತನಿಗೆ ಪ್ರತ್ಯಕ್ಷಳಾದಳು.

ವರದಳಾಗಿ ಹೀಗೆ ಹೇಳಿದಳು: 'ಬ್ರಹ್ಮಚರ್ಯೆ, ಶುದ್ಧಿ, ದಮ, ನಿಯಮಗಳಿಂದ ಸರ್ವಾತ್ಮನಾ ನೀನು ನನ್ನಲ್ಲಿ ಭಕ್ತಿಯನ್ನು ತೋರಿಸಿರುವೆ. ನಾನು ಸಂತುಷ್ಟಳಾಗಿದ್ದೇನೆ. ನಿನಗೆ ಇಷ್ಟವಾದುದನ್ನು ಕೇಳಿಕೊ, ಕೊಡುತ್ತೇನೆ. ನಿನ್ನ ಧರ್ಮದಲ್ಲಿ ಯಾವ ರೀತಿಯ ಪ್ರಮಾದವೂ ಬೇಡ.' ಅಶ್ವಪತಿಗೆ ಸಂತೋಷವಾಯಿತು. 'ದೇವಿ, ಈ ನಿನ್ನ ಆರಾಧನೆಯನ್ನು ಮಕ್ಕಳಾಗಬೇಕೆಂದು ನಡಸಿದ್ದೇನೆ. ನನ್ನ ಕುಲ ವೃದ್ಧಿಯಾಗುವಂತೆಯೂ ಅದು ಉಳಿಯುವಂತೆಯೂ ಬಹು ಮಂದಿ ಗಂಡುಮಕ್ಕಳನ್ನು ನನಗೆ ಅನುಗ್ರಹಿಸು' ಎನ್ನುವನು. ಸಾವಿತ್ರೀದೇವಿ – 'ನೀನು ಪುತ್ರಾರ್ಥವಾಗಿ ಈ ವ್ರತವನ್ನು ನೆರವೇರಿಸುತ್ತಿರುವುದನ್ನು ನಾನು ಬಲ್ಲೆ. ನಾನು ಬ್ರಹ್ಮನಲ್ಲಿ ಇದನ್ನು ಅರಿಕೆ ಮಾಡಿದೆ. ತೇಜಸ್ವಿನಿಯಾದ ಮಗಳೊಬ್ಬಳು ಬೇಗ ನಿನಗೆ ಹುಟ್ಟುತ್ತಾಳೆ. ಬ್ರಹ್ಮನ ಇಷ್ಟ ಹೀಗಿದೆ. ಈ ಮಾತಿಗೆ ಯಾವ ಉತ್ತರವನ್ನೂ ಕೊಡಬೇಡ' – ಎಂದು ಹೇಳಿ ಆಕೆ ಮರೆಯಾಗುವಳು. ಅಶ್ವಪತಿ ಮಹಾರಾಜನಿಗೆ ಗಂಡು ಮಕ್ಕಳು ಹುಟ್ಟದೆ ಮಗಳು ಹುಟ್ಟಿದ ಸಂದರ್ಭ ಇದು.

ಮಹಾರಾಜನು ದೇವಿಯ ಮಾತನ್ನು ಸಂತೋಷದಿಂದ ಒಪ್ಪಿಕೊಂಡನು. ತಪಸ್ಸು ನಿಯಮಗಳನ್ನು ಮುಗಿಸಿ ಪುನಃ ಸಂಸಾರದ ಕಡೆಗೆ ಮನಸ್ಸನ್ನು ತಿರುಗಿಸಿದನು. ಸ್ವಲ್ಪ ಕಾಲದಲ್ಲಿಯೇ ಆತನ ಹಿರಿಯ ರಾಣಿಯಾದ ಮಾಳವೀದೇವಿ ಗರ್ಭತಾಳಿ ಒಂದು ಹೆಣ್ಣು ಮಗುವನ್ನು ಹೆತ್ತಳು. ಈ ಮಗಳು ಸಾವಿತ್ರೀ ದೇವಿಯ ಪ್ರೀತಿದಾನವಾಗಿ ಬಂದವಳು. ಆದ್ದರಿಂದ ತಂದೆ, ಹಿರಿಯರು, ವಿಪ್ರರು ಎಲ್ಲರೂ ಅವಳಿಗೆ ಸಾವಿತ್ರಿಯೆಂದು ಹೆಸರಿಟ್ಟರು. ಸಾಕ್ಷಾತ್ ಲಕ್ಷ್ಮಿಯ ಹಾಗೆ ರಾಜಕುಮಾರಿ ದಿನೇ ದಿನೇ ಬೆಳೆದು ಕಾಲಕ್ರಮದಲ್ಲಿ ಯೌವನಸ್ಥೆಯಾದಳು. ಬಂಗಾರದ ಪ್ರತಿಮೆಯಂತೆ,

ಬೆಳೆಯುತ್ತಿರುವ ಆಕೆಯನ್ನು ಜನ ನೋಡಿ ಆಶ್ಚರ್ಯಪಟ್ಟರು. ಪದ್ಮಪಲಾಶ ದಂತೆ ಕಣ್ಣು, ಉರಿವ ತೇಜಸ್ಸು. ಇದನ್ನು ಕಂಡು ಯಾವ ಗಂಡಿಗೂ ಆಕೆಯನ್ನು ಮದುವೆಯಾಗುವ ಧೈರ್ಯ ಬರಲಿಲ್ಲ. ಹೀಗೆ ಕೆಲವು ಕಾಲ ನಡೆಯಿತು. ಒಂದು ದಿನ ಶಿರಸ್ನಾನ ಮಾಡಿ, ಉಪವಾಸದಿಂದ ದೇವತೆ ಗಳನ್ನು ಪೂಜಿಸಿ, ಅಗ್ನಿಗೆ ನಮಸ್ಕರಿಸಿ ವಿಪ್ರರಿಂದ ಹರಕೆ ಹೊತ್ತು, ಅವರು ಕೊಟ್ಟ ಹೂವನ್ನು ಕೈಯಲ್ಲಿ ಹಿಡಿದು ತಂದೆಯ ಬಳಿಗೆ ಬಂದಳು. ನಮಸ್ಕರಿಸಿ ಆತನ ಪಕ್ಕದಲ್ಲಿ ನಿಂತಳು. ಶ್ರೀಯಂತಹ ರೂಪೂ ಶುಚಿ ತೇಜಸ್ಸೂ ಉಳ್ಳ, ಬೆಳೆದ ಮಗಳನ್ನು ರಾಜನು ನೋಡಿದನು. ದೇವಕನ್ಯೆ ಯಂತೆ ರೂಪುಳ್ಳ ಈ ಮಗಳನ್ನು ಕೈಹಿಡಿಯಲು ಯಾರೂ ತನ್ನನ್ನು ಬೇಡಲು ಬಾರದುದನ್ನು ನೋಡಿ ರಾಜನಿಗೆ ದುಃಖವಾಯಿತು. ‘ಮಗು, ನಿನ್ನನ್ನು ಯೋಗ್ಯನಾದ ವರನಿಗೆ ಕೊಟ್ಟು ಮದುವೆ ಮಾಡಬೇಕಾದ ಕಾಲ ಒದಗಿದೆ. ಯಾರೂ ತಾವಾಗಿ ನನ್ನನ್ನು ಕೇಳಲು ಬರಲಿಲ್ಲ. ಗುಣದಲ್ಲಿ ನಿನಗೆ ಸಮಾನನಾಗಿರುವ ಗಂಡನನ್ನು ನೀನೇ ಹೋಗಿ ಹುಡುಕಿಕೊಂಡು ಬಾ, ತಾಯಿ. ನೀನು ಒಪ್ಪಿದ ವರನಿಗೆ ನಿನ್ನನ್ನು ಕೊಟ್ಟು ಮದುವೆ ಮಾಡುತ್ತೇನೆ. ಬೇಗ ಹುಡುಕಿಕೊಂಡು ಬಾ’ ಎಂದು ತಂದೆ ಮಗಳಿಗೆ ಆಜ್ಞಾಪಿಸಿದನು. ಪ್ರಯಾಣಕ್ಕೆ ಎಲ್ಲವೂ ಸಿದ್ಧವಾಯಿತು. ಲಜ್ಜೆಯಿಂದ ಆಕೆ ತಂದೆಗೆ ನಮಸ್ಕಾರಮಾಡಿ ಆತನ ಅಪ್ಪಣೆಯಂತೆ ತನ್ನ ಇಚ್ಛೆಗೊಪ್ಪುವ ವರನನ್ನು ಹುಡುಕಲು ಹೊರಟಳು.

ಆಕೆಯ ಜೊತೆಯಲ್ಲಿ ವೃದ್ಧರೂ ಮಂತ್ರಿಗಳೂ ಹೊರಟರು. ದೇಶ ದೇಶ, ಆಶ್ರಮ, ಕಾಡು, ತೀರ್ಥ, ಕ್ಷೇತ್ರ ತಿರುಗಾಡಿದಳು. ಹಿರಿಯರಿಗೆ, ಋಷಿಗಳಿಗೆ, ರಾಜರ್ಷಿಗಳಿಗೆ ಪಾದವಂದನೆ ಮಾಡಿದಳು. ತೀರ್ಥಗಳಲ್ಲಿ ಧನದಾನ ಮಾಡಿದಳು. ಸುವರ್ಣ ರಥದಲ್ಲಿ ಕುಳಿತು ಮಂತ್ರಿಗಳೊಡನೆ ದಿವ್ಯ ಕ್ಷೇತ್ರಗಳಲ್ಲಿ ಸಂಚರಿಸಿ ಪ್ರಯಾಣವನ್ನು ಮುಗಿಸಿ ತನ್ನ ಪಟ್ಟಣಕ್ಕೆ ಹಿಂದಿರುಗಿದಳು.

ಅಶ್ವಪತಿಯ ಸಭೆಗೆ ನಾರದರು ಆ ಸ್ವಲ್ಪ ಮುಂಚೆ ದಯಮಾಡಿಸಿದ್ದರು. ಅವರೊಡನೆ ರಾಜನು ಅದು ಇದು ಮಾತನಾಡುತ್ತಿರುವಾಗ ಸಾವಿತ್ರಿ ಮಂತ್ರಿ

ಗಳೊಡನೆ ತಂದೆ ಕುಳಿತಿರುವಲ್ಲಿಗೆ ಬಂದಳು ನಾರದರೊಡನೆ ಕುಳಿತಿರುವ ತಂದೆಯನ್ನು ಕಂಡು ಹಿರಿಯರಿಬ್ಬರಿಗೂ ನಮಸ್ಕಾರ ಮಾಡಿ ಕೈಮುಗಿದು ನಿಂತಳು. ಈಕೆ ರಾಜಕುಮಾರಿ ಸಾವಿತ್ರಿ, ಎಂದು ನಾರದರು ಅರಿತು "ಮಹಾರಾಜ, ಈ ನಿನ್ನ ಮಗಳು ಇಷ್ಟು ದಿನ ಎಲ್ಲಿ ಹೋಗಿದ್ದಳು? ಈಗ ಎಲ್ಲಿಂದ ಬಂದಳು? ಯುವತಿಯಾದ ಈಕೆಯನ್ನು ಯೋಗ್ಯನಾದ ವರನಿಗೆ ಕೊಟ್ಟು ಮದುವೆ ಮಾಡದೆ ಇನ್ನೂ ಏಕೆ ತಡೆದಿದ್ದೀಯೆ?" ಎಂದು ಪ್ರಶ್ನೆ ಮಾಡಿದರು. "ಈ ಕಾರ್ಯಕ್ಕಾಗಿಯೇ ನನ್ನ ಮಗಳು ಪ್ರಯಾಣ ಮಾಡಿದ್ದಳು. ಅದನ್ನು ಮುಗಿಸಿ ಈಗ ಹಿಂದಿರುಗಿದ್ದಾಳೆ. ಓ ದೇವರ್ಷಿ, ಆಕೆ ಯಾವ ಯುವಕನನ್ನು ಗಂಡನನ್ನಾಗಿ ವರಿಸಿರುವಳೋ ಅದನ್ನು ತಾವೇ ಕೇಳಬಹುದು" ಎಂದು ಮಹಾರಾಜನು ಉತ್ತರ ಕೊಟ್ಟನು. "ಋಷಿಗಳಿಗೆ ವಿಸ್ತಾರವಾಗಿ ಇದನ್ನು ಹೇಳು, ತಾಯಿ" ಎಂದು ಮಗಳಿಗೆ ಅಪ್ಪಣೆ ಮಾಡಿದನು.

ತಂದೆಯ ಮಾತನ್ನು ದೇವತೆಯ ಮಾತೆಂದೇ ಭಾವಿಸಿ ಸಾವಿತ್ರಿ, – "ದ್ಯುಮತ್ಸೇನನೆಂಬ ಧರ್ಮಾತ್ಮನಾದ ಕ್ಷತ್ರಿಯನು ಶಾಲ್ವದ (ಇಂದಿನ ಆಗ್ರಾ ಭರತಪುರಗಳ ಹತ್ತಿರದ ದೇಶ) ಮಹಾರಾಜನು. ಆತನು ದುರ್ದೈವದಿಂದ ಕುರುಡನಾದನಂತೆ. ಆತನ ಮಗನು ಇನ್ನೂ ಚಿಕ್ಕ ವಯಸ್ಸಿನವನು. ಪೂರ್ವ ವೈರಿಗಳಾದ ನೆರೆಯ ರಾಜ್ಯದವರು ದುರ್ಬಲನಾಗಿರುವ ಆತನ ಸ್ಥಿತಿಯನ್ನರಿತು ಆತನ ರಾಜ್ಯವನ್ನಪಹರಿಸಿದ್ದಾರೆ. ದ್ಯುಮತ್ಸೇನನು ಹೆಂಡತಿಯನ್ನೂ ಮಗನನ್ನೂ ಕರೆದುಕೊಂಡು ಅರಣ್ಯಪ್ರವೇಶ ಮಾಡಿ ಅಲ್ಲಿ ವ್ರತಸ್ಥನಾಗಿದ್ದಾನೆ. ಪಟ್ಟಣದಲ್ಲಿ ಹುಟ್ಟಿದವನಾದರೂ ರಾಜಕುಮಾರನು ತಪೋವನದಲ್ಲಿ ಬೆಳೆದಿರುವನು. ಸತ್ಯವಾನನೆಂದು ಕುಮಾರನ ಹೆಸರು. ಆತನು ನನಗೆ ಅನುರೂಪನು. ಆತನನ್ನು ಭರ್ತನೆಂದು ಮನಸಾ ನಾನು ವರಿಸಿದ್ದೇನೆ" ಎಂದಳು.

ನಾರದರು, "ಅರಿಯದೆ ಈ ಕುಮಾರನನ್ನು ವರಿಸಿ ಈ ಮಗು ಎಷ್ಟು ಕಷ್ಟಕ್ಕೆ ಈಡಾದಳು" ಎಂದುಕೊಂಡರು. ರಾಜನನ್ನು ಕುರಿತು "ಹೌದು, ಆತನು ಸತ್ಯವಾನನೇ ಸರಿ. ತಂದೆ ಸತ್ಯವಂತ. ತಾಯಿಯೂ

ಸತ್ಯವನ್ನೇ ನುಡಿಯುವವಳು. ಆದುದರಿಂದ ಆಶ್ರಮದ ಬ್ರಾಹ್ಮಣರೆಲ್ಲ ಇವರ ಮಗನಿಗೆ ಸತ್ಯವಾನನೆಂದು ಹೆಸರಿಟ್ಟಿದು ಸಾರ್ಥಕವಾಗಿದೆ. ಚಿಕ್ಕಂದಿನಿಂದಲೂ ಅವನಿಗೆ ಕುದುರೆಗಳಲ್ಲಿ ಪ್ರೀತಿ. ಮಣ್ಣಿಂದ ಕುದುರೆಗಳನ್ನು ಮಾಡುವುದೂ ಚಿತ್ರಗಳಲ್ಲಿ ಕುದುರೆಗಳನ್ನು ರೂಪಿಸುವುದೂ ಅವನಿಗೆ ಬಹುಪ್ರಿಯ. ಅದರಿಂದ ಅವನಿಗೆ ಚಿತ್ರಾಶ್ವನೆಂಬ ಹೆಸರೂ ಉಂಟು. ನನಗೆ ಅವನ ಸಂಗತಿ ತಿಳಿದಿದೆ. ಅವನು ಗುಣವಂತ" ಎಂದು ನಾರದರು ಹೇಳಲು, ಅವನ ರೂಪ, ಯೋಗ್ಯತೆ, ವೀರ್ಯ, ಶೀಲ ಸೌಜನ್ಯಗಳನ್ನು ಕುರಿತು ಅಶ್ವಪತಿ ಹೆಚ್ಚು ವಿವರಗಳನ್ನು ವಿಚಾರಿಸಿದನು. ಸತ್ಯವಾನನು ಸೂರ್ಯನಂತೆ ತೇಜಸ್ವಿ ; ಬೃಹಸ್ಪತಿಯಂತೆ ಮತಿವಂತ ; ಮಹೇಂದ್ರನಂತೆ ಶೂರ ; ವಸುಮತಿಯಂತೆ ಕ್ಷಮಾಶೀಲ ; ಉದಾರಿ, ಮೃದು, ಶೂರ, ಸತ್ಯನಿಷ್ಠ, ಪ್ರಿಯದರ್ಶಿ ; ಜಿತೇಂದ್ರಿಯ ; ಸ್ನೇಹಪರ ; ಅಸೂಯೆಯಿಲ್ಲದವನು. ಅಕಾರ್ಯದಲ್ಲಿ ಅವನಿಗೆ ಎಂದೂ ಲಜ್ಜೆ ; ಅವನ ಧೃತಿ ವಿಶೇಷವಾದ್ದು. ಈ ಮುಂತಾದ ಸಂಗತಿಗಳನ್ನೂ ಆತನ ಋಜುತ್ವವನ್ನೂ ಕುರಿತು ಇತರ ಋಷಿಗಳು ನನಗೆ ಬಹುವಾಗಿ ಹೇಳಿದ್ದಾರೆ ಎನ್ನುವರು. ಅಶ್ವಪತಿ – ಭಗವನ್, ಆತನ ಗುಣಗಳನ್ನೆಲ್ಲ ತಾವು ನನಗೆ ವರ್ಣಿಸಿರುವಿರಿ. ಆತನಲ್ಲಿ ಯಾವುದಾದರೂ ದೋಷವಿದ್ದರೆ ದಯಮಾಡಿ ಅದನ್ನೂ ನನಗೆ ತಿಳಿಸಬೇಕು.

ನಾರದ – ಆತನಲ್ಲಿ ಒಂದು ದೋಷವುಂಟು. ಅವನು ಕ್ಷೀಣಾಯು. ಇನ್ನು ಒಂದು ವರುಷದೊಳಗೆ ಅವನು ದೇಹವನ್ನುಬಿಡುವನು

ರಾಜನಿಗೆ ಇದನ್ನು ಕೇಳಿ ಸಿಡಿಲು ಬಡಿದಹಾಗಾಗಿರಬೇಕು. ಮಗಳನ್ನು ಕುರಿತು "ಮಗಳೆ, ನನ್ನ ಮಾತನ್ನು ಕೇಳು. ಹೋಗಿ ಬೇರೆ ಯಾವ ವರನನ್ನಾದರೂ ಹುಡುಕಿಕೊಂಡು ಬಾ. ಋಷಿಗಳು ಹೇಳಿದ ಈ ಒಂದು ಮಹದ್ದೋಷ ಉಳಿದ ಎಲ್ಲ ಗುಣಗಳನ್ನೂ ನುಂಗುವುದು. ಆದ್ದರಿಂದ ಎರಡನೆಯವನನ್ನು ಆರಿಸು" ಎನ್ನುವನು. ಆಕೆ ಒಪ್ಪಲಿಲ್ಲ.

ಸಕೃದಂಶೋ ನಿಪತತಿ ಸಕೃತ್ಕನ್ಯಾ ಪ್ರದೀಯತೇ
ಸಕೃದಾಹ ದದಾನೀತಿ ತ್ರೀಣ್ಯೇತಾನಿ ಸಕೃತ್ ಸಕೃತ್

ದೀರ್ಘಾಯುರಥ ವಾಲ್ಪಾಯುಃ ಸಗುಣೋ ನಿರ್ಗುಣೋಽಪಿ ವಾ
ಸಕೃದ್ವೃತ್ತೋ ಮಯಾ ಭರ್ತಾ ನ ದ್ವಿತೀಯಂ ವೃಣೋಮ್ಯಹಂ
ಮನಸಾ ನಿಶ್ಚಯಂ ಕೃತ್ವಾ ತತೋ ವಾಚಾಽಭಿಧೀಯತೇ
ಕ್ರಿಯತೇ ಕರ್ಮಣಾ ಪಶ್ಚಾತ್ ಪ್ರಮಾಣಂ ಮೇ ಮನಸ್ತತಃ

–ಕೆಳಗೆ ಬೀಳುವ ಕಲ್ಲು ಒಂದು ಸಲ ಮಾತ್ರ ಬೀಳುವುದು. ಕನ್ಯೆ ತನ್ನಿಚ್ಛೆಗೆ ಬಂದ ವರನಿಗೆ ತನ್ನನ್ನು ಒಂದೇ ಸಲ ತೆತ್ತುಕೊಳ್ಳುವಳು. ದಾನಿ ತನ್ನ ದಾನವನ್ನು ಒಂದೇ ಸಲಕ್ಕೆ ಕೊಟ್ಟುಬಿಡುವನು. ಈ ಮೂರೂ ಒಂದೊಂದೇ ಸಲ ನಡೆಯುವಂತಹವು. ದೀರ್ಘಾಯುವಾಗಲಿ ಅಲ್ಪಾಯುವಾಗಲಿ, ಗುಣಿಯಾಗಲಿ ನಿರ್ಗುಣಿಯಾಗಲಿ, ಒಂದು ಸಲ ವರಿಸಿ ಇವನೇ ನನಗೆ ಗಂಡನೆಂದು ನಿರ್ಣಯಿಸಿದ್ದೇನೆ. ಎರಡನೆಯವನನ್ನು ನಾನು ವರಿಸುವವಳಲ್ಲ. ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡದ್ದನ್ನೇ ಮಾತು ನುಡಿಯುವುದು. ಅದೇ ಬಳಿಕ ಕಾರ್ಯತಃ ಮಾಡತಕ್ಕದ್ದು. ಮನಸ್ಸಿನ ನಿಶ್ಚಯವೇ ಪ್ರಮಾಣ –

ಎಂದ ಸಾವಿತ್ರಿಯ ಪ್ರತಿಜ್ಞೆಯನ್ನು ನಾರದರೂ ತಂದೆಯೂ ಕೇಳಿದರು. "ನಿನ್ನ ಮಗಳು ಧರ್ಮಿಷ್ಠಳು. ಸ್ಥಿರಬುದ್ಧಿಯುಳ್ಳವಳು. ಆಕೆಯನ್ನು ತಿರುಗಿಸಲು ಶಕ್ಯವಿಲ್ಲ. ಸತ್ಯವಂತನಂತಹ ಗುಣಶಾಲಿ ಬೇರೆ ಯಾರೂ ಇಲ್ಲ. ನಿನ್ನ ಮಗಳನ್ನು ಅವನಿಗೆ ಕೊಟ್ಟು ಮದುವೆಮಾಡುವುದು ತಕ್ಕುದೆಂದು ನನ್ನ ಮನಸ್ಸಿಗೆ ತೋರುತ್ತದೆ" ಎಂದು ನಾರದರು ನುಡಿದರು. ಗುರುವಿನ ಅಪ್ಪಣೆಯಂತೆ ಅಶ್ವಪತಿ ಸತ್ಯವಂತನಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಲು ನಿಶ್ಚಯಿಸಿದನು. ಯಾವ ವಿಘ್ನವೂ ಇಲ್ಲದೆ ಮಗಳ ಮದುವೆ ನೆರವೇರಲಿ ಎಲ್ಲವೂ ಮಂಗಳವಾಗಲಿ ಎಂದು ಹೇಳಿ ನಾರದ ಮಹರ್ಷಿ ಅಲ್ಲಿಂದ ಪ್ರಯಾಣ ಬೆಳಸಿದರು. ಅಶ್ವಪತಿ ಮಹಾರಾಜನು ತನ್ನ ಮಗಳ ವಿವಾಹಕ್ಕೆ ಸಂಬಂಧಿಸಿದ ಸಮಸ್ತ ಸಿದ್ಧತೆಗಳನ್ನೂ ಮಾಡಿಕೊಂಡನು.

## ೨

ವೃದ್ಧರನ್ನೂ ಬ್ರಾಹ್ಮಣರನ್ನೂ ಋತ್ವಿಜ ಪುರೋಹಿತರನ್ನೂ ಒಟ್ಟು ಗೂಡಿಸಿ ಶುಭವಾದ ಒಂದು ದಿನ ಅಶ್ವಪತಿ ಮಹಾರಾಜನು ತನ್ನ ಮಗಳೊಡನೆ ಪ್ರಯಾಣಮಾಡಿ ದ್ಯುಮತ್ಸೇನ ಮಹಾರಾಜನು ಆಶ್ರಮವನ್ನು ಮಾಡಿಕೊಂಡಿದ್ದ ಮೇಧ್ಯವೆಂಬ ಅರಣ್ಯವನ್ನು ಸೇರಿದನು. ಆಶ್ರಮದಲ್ಲಿ ಒಂದು ದೊಡ್ಡ ಶಾಲವೃಕ್ಷ. ಅದರ ಕೆಳಗೆ ಚಕ್ಷುಹೀನನಾದ ರಾಜನು ಒಂದು ದರ್ಭಾಸನದ ಮೇಲೆ ಕುಳಿತಿದ್ದನು. ಆತನ ಬಳಿಯಲ್ಲಿ ಅಶ್ವಪತಿ ಹೋಗಿ ಸೂಕ್ತವಾದ ಮಾತುಗಳನ್ನಾಡಿ ತಾನಿಂಥವನೆಂದು ತಿಳಿಸಿದನು. ಬಂದ ರಾಜನಿಗೆ ಅರ್ಘ್ಯ ಆಸನಗಳನ್ನು ಕೊಟ್ಟು ದ್ಯುಮತ್ಸೇನನು ಮರ್ಯಾದೆ ಮಾಡಿದನು. ಏನು ತಾವು ಬಂದದ್ದು? ಎಂದು ಮುಂತಾಗಿ ಆ ರಾಜನು ಈ ರಾಜನನ್ನು ಕೇಳಿದನು. ಬಂದಿರುವ ಉದ್ದೇಶವನ್ನು ತಿಳಿಸುತ್ತ ಕಡೆಗೆ,

ಅಶ್ವಪತಿ – ರಾಜರ್ಷಿ, ನನಗೆ ಸಾವಿತ್ರಿ ಎಂಬ ಮಗಳಿದ್ದಾಳೆ. ಧರ್ಮಜ್ಞರಾದ ತಾವು ಆಕೆಯನ್ನು ತಮ್ಮ ಸೊಸೆಯಾಗಿ ಸ್ವೀಕರಿಸ ಬೇಕು.

ದ್ಯುಮತ್ಸೇನ – ನಾವು ರಾಜ್ಯಚ್ಯುತರಾಗಿ ವನವಾಸವನ್ನು ಆಶ್ರಯಿ ಸಿದ್ದೇವೆ. ತಪಸ್ವಿಗಳಂತೆ ನಿಯಮದಲ್ಲಿದ್ದೇವೆ. ಈ ಕಷ್ಟಗಳಿಗೆ ನಿಮ್ಮ ಮಗಳು ಅನರ್ಹಳು. ಆಕೆ ಇದನ್ನು ಸಹಿಸಲಾರಳು.

ಅಶ್ವಪತಿ – ಸಂಸಾರದಲ್ಲಿ ಹುಟ್ಟಿದವರಿಗೆಲ್ಲ ಸುಖ ದುಃಖ ಎರಡೂ ಉಂಟು. ಇದು ಲೋಕಸ್ವರೂಪ. ಹೀಗೆಂಬುದು ನನಗೂ ನನ್ನ ಮಗಳಿಗೂ ಇಬ್ಬರಿಗೂ ಗೊತ್ತು. ನಮ್ಮಂಥವರಿಗೆ ತಾವು ಈ ಮಾತನ್ನು ಹೇಳ ಬೇಕಾಗಿಲ್ಲ. ನಾವೇನೊ ಮನಸ್ಸಿನಲ್ಲಿ ನಿಶ್ಚಯ ಮಾಡಿಕೊಂಡು ತಮ್ಮಲ್ಲಿಗೆ ಬಂದಿದ್ದೇವೆ. ಸ್ನೇಹದಿಂದಲೂ ಪ್ರೀತಿಯಿಂದಲೂ ತಾವು ನನ್ನ ಆಸೆಯನ್ನು ನೆರವೇರಿಸಿಕೊಡಬೇಕು. ನಮಗೆ ಈ ಸಂಬಂಧ ಪ್ರಿಯವಾಗಿದೆ; ಅಭಿಮತ ವಾಗಿದೆ. ನಮ್ಮ ಮಾತನ್ನು ತೆಗೆದುಹಾಕಬೇಡಿ. ನನಗೂ ನಿಮಗೂ

ಸಂಬಂಧ ಅನುರೂಪವಾಗಿದೆ. ನನ್ನ ಮಗಳನ್ನು ನಿಮ್ಮ ಸೊಸೆಯನ್ನಾಗಿ ಸ್ವೀಕರಿಸಿ; ಸತ್ಯವಾನನಿಗೆ ಭಾರ್ಯೆಯಾಗಿ ಮಾಡಿಕೊಳ್ಳಿ.

ದ್ಯುಮತ್ಸೇನನಿಗೆ ಮೊದಲಿಂದಲೂ ಈ ಸಂಬಂಧ ಅಭಿಲಷಿತವಾಗಿದ್ದಿತಂತೆ. ಆದರೆ ತಾನು ರಾಜ್ಯಭ್ರಷ್ಟನಾಗಿರುವಾಗ ಈ ಪ್ರಸ್ತಾಪ ಹೇಗೆ ಮಾಡುವುದೆಂದು ಯೋಚಿಸಿ ಅಲ್ಲಿಗೇ ಆ ಚಿಂತನೆಯನ್ನು ಬಿಟ್ಟಿದ್ದನಂತೆ. ಈಗ ತಾನಾಗಿ ಅಶ್ವಪತಿ ಮಹಾರಾಜನು ಮಗಳನ್ನು ಸತ್ಯವಾನನಿಗೆ ಮದುವೆ ಮಾಡಿಕೊಡುವೆನೆಂಬ ಅಭಿಪ್ರಾಯದಿಂದ ಬಳಿಗೆ ಬಂದಾಗ, ಹಿಂದಿನ ತನ್ನ ಅಭಿಕಾಂಕ್ಷೆಯೇ ನೆರವೇರಿದಂತಾಯಿತು. ಆದ್ದರಿಂದ "ನಿಮ್ಮ ಇಷ್ಟ ಹಾಗಿದ್ದರೆ ನನಗೂ ಸಮ್ಮತವೇ, ನೀವು ನನ್ನ ಅತಿಥಿಗಳು" ಎಂದು ದ್ಯುಮತ್ಸೇನ ಮಹಾರಾಜನು ಉತ್ತರ ಕೊಟ್ಟನು. ಇನ್ನೇನು? ಆಶ್ರಮದಲ್ಲಿನ ಎಲ್ಲ ದ್ವಿಜರನ್ನೂ ಅಲ್ಲಿಗೆ ಬರಮಾಡಿದರು. ಯಥಾವಿಧಿಯಾಗಿ ಸಾವಿತ್ರಿ ಸತ್ಯವಾನರಿಗೆ ವಿವಾಹಮಂಗಳವನ್ನು ನಡಸಿದರು. ಆಕೆಗೆ ಬೇಕಾದ ವಸ್ತ್ರಾದಿಗಳನ್ನು ಕೊಟ್ಟು ಪರಮ ಸಂತೋಷದಿಂದ ಅಶ್ವಪತಿ ಮಹಾರಾಜನು ತನ್ನ ಮಗಳಿಂದ ಬೀಳ್ಕೊಂಡು ಪಟ್ಟಣಕ್ಕೆ ಹಿಂದಿರುಗಿದನು. ಸರ್ವಗುಣಾನ್ವಿತೆಯಾದ ಹೆಂಡತಿ ದೊರೆತಳೆಂದು ಸತ್ಯವಾನನು ಹರ್ಷಪಟ್ಟನು. ತನ್ನ ಮನಸ್ಸಿನಲ್ಲಿ ಬಯಸಿದ ಗಂಡನು ದೊರೆತನೆಂದು ಸಾವಿತ್ರಿ ಹರ್ಷಗೊಂಡಳು.

ತಂದೆ ತನ್ನ ಊರಿಗೆ ಹಿಂದಿರುಗಿದ ಮೇಲೆ ಸಾವಿತ್ರಿ ತನ್ನ ಒಡವೆಗಳೆಲ್ಲವನ್ನೂ ತೆಗೆದಿಟ್ಟು ನಾರುಬಟ್ಟೆಯನ್ನೂ ಕಾವಿಯನ್ನೂ ಧರಿಸಿ ಆಶ್ರಮಕ್ಕೆ ತಕ್ಕ ಉಡುಗೆಗಳನ್ನು ಮಾಡಿಕೊಂಡಳು. ವಿನಯದಿಂದಲೂ ದಮಾದಿ ಗುಣಗಳಿಂದಲೂ ಎಲ್ಲರನ್ನೂ ತುಷ್ಟಿಪಡಿಸಿದಳು. ಎಲ್ಲ ಕಾರ್ಯಗಳಲ್ಲಿಯೂ ಪ್ರೀತಿ ಆದರಗಳಿಂದ ಪರಿಚರ್ಯೆ ನಡಸುವಳು; ಅತ್ತೆಯ ಶರೀರಕ್ಕೆ ಸುಖವಾಗುವಂತೆ ಸೇವೆ ಸಲ್ಲಿಸುವಳು; ಮಾವಂದಿರ ಕಾರ್ಯ ದೇವಕಾರ್ಯವೆಂಬಂತೆ ಗೌರವ ಭಕ್ತಿಗಳಿಂದ ಸೇವಿಸಿ ಹಿತವಾಗಿ ಮಿತವಾಗಿ ಮಾತನಾಡುವಳು; ಆತನ ಪೂಜೆ ಪುರಸ್ಕಾರಗಳಲ್ಲಿ ನೆರವಾಗುವಳು; ಆಮೇಲೆ ಪ್ರಿಯವಾಕ್ಯಗಳಿಂದಲೂ ನಿಪುಣತೆ ಶಾಂತಿಗಳಿಂದಲೂ ಏಕಾಂತ

ಉಪಚಾರದಿಂದಲೂ ಗಂಡನನ್ನು ಸಂತೋಷಪಡಿಸುವಳು. ಹೀಗೆ ಆಶ್ರಮ ದಲ್ಲಿ ಆಕೆ ಪ್ರತಿದಿನವೂ ತನ್ನ ಭಾಗದ ಕಾರ್ಯಗಳನ್ನು ನಡಸಿಕೊಂಡು ಎಲ್ಲರಿಗೂ ಬೇಕಾದವಳಾದಳು. ಎಲ್ಲರ ಹೊರತೃಪ್ತಿಯಲ್ಲಿ ಕಾಲ ಕಳೆಯಿತು. ನಾರದರು ಹಿಂದೆ ಆಡಿದ ಮಾತುಗಳನ್ನು ತನ್ನ ಮನಸ್ಸಿನಲ್ಲಿಯೇ ಇಟ್ಟು ಕೊಂಡು ಮಲಗುವಾಗ, ಎಚ್ಚರವಿರುವಾಗ – ಹಗಲು, ರಾತ್ರಿ – ಚಿಂತಿಸುತ್ತ ಸಾವಿತ್ರಿ ಈ ಕಾಲವನ್ನು ಕಳೆದಳು.

ಸತ್ಯವಾನನ ಮರಣಕಾಲ ಸಮೀಪಿಸುತ್ತ ಬಂದ ಹಾಗೆಲ್ಲ ದಿವಸ ದಿವಸವನ್ನೂ ಎಣಿಸಿದಳು. ಇನ್ನು ನಾಲ್ಕು ದಿನಗಳಲ್ಲಿ ಆತನು ಮೃತಿ ಹೊಂದುವನೆಂದು ತಾನು ಗ್ರಹಿಸಿದಾಗ ಮೂರು ದಿನಗಳ ವ್ರತವೊಂದನ್ನು ಕೈಕೊಂಡು ದಿವಾರಾತ್ರಿ ಅದನ್ನು ನಿಷ್ಠೆಯಿಂದ ನಡಸಿದಳು. ಸೊಸೆ ಹಿಡಿದ ನಿಷ್ಠುರ ವ್ರತದ ಸಂಗತಿಯನ್ನು ಕೇಳಿ ರಾಜನಿಗೆ ಚಿಂತೆಯಾಯಿತು. ಆತನು ಎದ್ದು ಬಂದು ' ಸಾವಿತ್ರಿ, ಈ ವ್ರತ ಅತಿ ಕಠಿಣವಾದ್ದು. ನೀನು ರಾಜಪುತ್ರಿ. ಇಂಥದನ್ನು ಆರಂಭಿಸಿರುವೆ. ದುಷ್ಕರವಾದ, ನಿದ್ರಾಹಾರ ವಿಲ್ಲದೆ ಇರಬೇಕಾದ ಇದನ್ನು ಹೇಗೆ ನಿರ್ವಹಿಸುವೆ ? ' ಎಂದನು.

ಸಾವಿತ್ರಿ – ತಂದೆಯವರು ಸಂತಾಪಗೊಳ್ಳುವ ಅಗತ್ಯವಿಲ್ಲ. ಇದನ್ನು ನೆರವೇರಿಸಲು ನಾನು ಶಕ್ತಳಾಗಿದ್ದೇನೆ. ಯಾವುದೋ ಒಂದು ಕಾರಣದಿಂದ ಈ ವ್ಯವಸಾಯಕ್ಕೆ ತೊಡಗಿದ್ದೇನೆ. ಇದಕ್ಕೆ ತಾವು ಒಪ್ಪಬೇಕು.

ದ್ಯುಮತ್ಸೇನ – ಮಗು, ವ್ರತವನ್ನು ನಿಲ್ಲಿಸು ಎಂದು ನಾನು ನಿನಗೆ ಹೇಳುವವನಲ್ಲ. ನನ್ನಂಥವರು ಇಂಥದನ್ನು ನೆರವೇರಿಸು ಎಂದು ಆಡಬೇಕೇ ಹೊರತು ಬೇಡವೆನ್ನಬಾರದು.

ವ್ರತ ಹಿಡಿದು ಕುಳಿತ ಸಾವಿತ್ರಿ ಒಂದು ಮರದ ತೊಲೆಯಂತೆ ಕಾಣುತ್ತಿದ್ದಳು. ಎರಡು ದಿನ ಕಳೆದುವು. ನಾಳೆ ತನ್ನ ಪತಿ ಮೃತನಾಗು ವನೆಂಬ ಚಿಂತೆ ಆಕೆಯನ್ನು ಆವರಿಸಿತು. ಜಾಗರಣೆ ಮಾಡುತ್ತ, ದುಃಖ ದಲ್ಲಿ ಎರಡನೆಯ ರಾತ್ರಿಯನ್ನೂ ಕಳೆದಳು.

ಇಂದು ಆ ದಿನ : ತನ್ನ ಭರ್ತಾರನು ತೀರಿಕೊಳ್ಳುವನೆಂದು ನಾರದ ಋಷಿ ಹೇಳಿದ್ದ ದಿನ. ಅಗ್ನಿಯನ್ನು ಹೊತ್ತಿಸಿ ಅದಕ್ಕೆ ಬೇಕಾದಂತೆ

ಹವಿಸ್ಸನ್ನು ಎರೆದಳು. ಸೂರ್ಯನು ಉದಯಿಸಿ ಮೇಲಕ್ಕೆ ಬರಲು ಪೂರ್ವಾಹ್ನದ ಕ್ರಿಯೆಗಳನ್ನೆಲ್ಲ ಮಾಡಿ ಮುಗಿಸಿದಳು. ಆ ಬಳಿಕ ಅಲ್ಲಿದ್ದ ಎಲ್ಲ ದ್ವಿಜರಿಗೂ ವೃದ್ಧರಿಗೂ ಅತ್ತೆ ಮಾವಂದಿರಿಗೂ ಅನುಕ್ರಮವಾಗಿ ಅಭಿವಾದನೆ ಮಾಡಿ ಅವರ ಎದುರಿಗೆ ಕೈ ಮುಗಿದು ನಿಂತಳು. ಅವರು ಸಾವಿತ್ರಿಯ ಶುಚಿಯನ್ನು ಕಂಡವರು. ಆಕೆಗೆ ಹಿತವಾಗಿ ನುಡಿದು, 'ನಿನಗೆ ಮಂಗಳವಾಗಲಿ. ಅವಿಧವೆಯಾಗಿ ದೀರ್ಘ ಕಾಲ ಬಾಳು' ಎಂದು ಆಶೀರ್ವಾದ ಮಾಡಿದರು. 'ಈ ಹರಕೆ ನೆರವೇರಲಿ' ಎಂದು ಸಾವಿತ್ರಿ ಧ್ಯಾನಯೋಗದಲ್ಲಿ ಮುಳುಗಿದಳು. ತಪಸ್ವಿಗಳು ಹೇಳಿದ ಮಂಗಳವನ್ನು ಮನಸ್ಸಿನಲ್ಲಿ ಹಾರೈಸುತ್ತ ಮುಹೂರ್ತವನ್ನು ಪ್ರತೀಕ್ಷಿಸುತ್ತ ಇದ್ದಳು. ಏಕಾಂತದಲ್ಲಿ ಚಿಂತಿಸುತ್ತ ದುಃಖಿತಳಾಗಿದ್ದ ಅವಳ ಬಳಿಗೆ ಅತ್ತೆ ಮಾವಂದಿರು ಬಂದು, ಪ್ರೀತಿಯಿಂದ, 'ಯಾವರೀತಿ ನಡಸುವೆಯೆಂದು ವ್ರತ ಹೊತ್ತೆಯೋ ಅದರಂತೆ ಸರಿಯಾಗಿ ಮಾಡಿ ಮುಗಿಸಿದ್ದೀಯೆ. ವ್ರತ ಮುಗಿದ ಬಳಿಕ ಪಾರಣೆ ಮಾಡಬಹುದು. ಆಹಾರ ಕಾಲ ಉಂಟಾಗಿದೆ. ಊಟ ಮಾಡಮ್ಮ' ಎಂದರು.

ಸಾವಿತ್ರಿ – ಸೂರ್ಯ ಮುಳುಗಲಿ ; ಕೃತಕಾಮಳಾಗಿ ಊಟ ಮಾಡುತ್ತೇನೆ. ಹಾಗೆ ಮಾಡುವೆನೆಂದೇ ನಾನು ಸಂಕಲ್ಪ ಮಾಡಿಕೊಂಡಿದ್ದದ್ದು. ಆ ಸಮಯವನ್ನು ಪರಿಪಾಲಿಸುವೆನು.

ತನ್ನ ಭೋಜನವನ್ನು ಕುರಿತು ಆಕೆ ಮಾತನಾಡುತ್ತಿರುವಾಗ ಭುಜದ ಮೇಲೆ ಕೊಡಲಿಯನ್ನು ಹೊತ್ತು ಸತ್ಯವಾನ್ ವನಕ್ಕೆ ಹೊರಡುತ್ತಿರುವುದು ಕಾಣಿಸಿತು. ಗಂಡನ ಬಳಿಗೆ ಹೋಗಿ,

ಸಾವಿತ್ರಿ – ನೀವು ದಯಮಾಡಿ ಇಂದು ಒಬ್ಬರೇ ಕಾಡಿಗೆ ಹೋಗಬಾರದು. ನಿಮ್ಮೊಡನೆ ನಾನೂ ಬರುತ್ತೇನೆ. ನನ್ನನ್ನು ತಡೆಯಬೇಡಿ.

ಸತ್ಯ – ನೀನು ಹಿಂದೆ ಕಾಡಿನಲ್ಲಿ ತಿರುಗಾಡಿದವಳಲ್ಲ. ದಾರಿಗಳು ಕಷ್ಟ. ವ್ರತೋಪವಾಸದಿಂದ ಬಳಲಿದ್ದೀಯೆ. ಹೀಗಿರುವಾಗ ಕಾಲ್ನಡಗೆಯಲ್ಲಿ ಹೇಗೆ ನಡೆದು ಬರಬಲ್ಲೆ ?

ಸಾವಿತ್ರಿ – ಉಪವಾಸದಿಂದ ನನಗೆ ಯಾವ ಬಳಲಿಕೆಯೂ ಶ್ರಮವೂ ಆಗಿಲ್ಲ. ಕಾಡಿಗೆ ಬರುವುದರಲ್ಲಿ ನನಗೆ ಉತ್ಸಾಹವುಂಟು. ದಯಮಾಡಿ ಅಡ್ಡಿ ಮಾಡಬಾರದು.

ಸತ್ಯ – ನಿನಗೆ ಅಂತಹ ಉತ್ಸಾಹವಿದ್ದರೆ ನಾನೇಕೆ ಅಡ್ಡಿ ಬರಲಿ ? ನಿನ್ನಿಷ್ಟದಂತೆ ನಡಸಿಕೊಡಲು ನನಗೂ ಒಪ್ಪಿಗೆಯೇ. ಆದರೆ ಅತ್ತೆ ಮಾವಂದಿರನ್ನು ಕೇಳಿಕೊಂಡು ಬಾ. ಆಗ ನನ್ನ ಮೇಲೆ ಯಾವ ದೋಷವೂ ಹೊರುವುದಿಲ್ಲ.

ಮಹಾವ್ರತಳಾದ ಸಾವಿತ್ರಿ ಅತ್ತೆ ಮಾವಂದಿರ ಬಳಿಗೆ ಹೋಗಿ ಅಭಿವಾದನೆ ಮಾಡಿದಳು. 'ಪತಿ ಫಲಾಹಾರವನ್ನು ತರುವುದಕ್ಕಾಗಿ ಕಾಡಿಗೆ ಹೋಗುತ್ತಿದ್ದಾರೆ. ಅವರೊಡನೆ ಹೋಗಲು ನನಗೆ ತುಂಬಾ ಆಸೆಯಾಗಿದೆ. ಅವರು ಈಗ ಹೋಗಲು ಅವರನ್ನು ಅಗಲಿ ನಾನಿರಲಾರೆ. ಅಗ್ನಿಹೋತ್ರಕ್ಕೆ ಸಂಬಂಧಪಟ್ಟ ದ್ರವ್ಯಗಳನ್ನು ತರಲು ನಿಮ್ಮ ಮಗ ಹೊರಟಿದ್ದಾರೆ. ಅದನ್ನು ನಾನು ತಡೆಯುವಹಾಗಿಲ್ಲ. ನನ್ನನ್ನು ಬೇಡ ವೆನ್ನದೆ ಈಗ ಖಂಡಿತವಾಗಿ ಅವರ ಜೊತೆಯಲ್ಲಿ ವನಕ್ಕೆ ಕಳಿಸಿಕೊಡಬೇಕು. ನಾನಿಲ್ಲಿ ಬಂದು ಸ್ವಲ್ಪಕಡಮೆ ಒಂದು ವರುಷ ಆಗಿದೆ. ಆಶ್ರಮದಿಂದ ಈವರೆಗೆ ಹೊರಗೆ ಹೋಗಿಲ್ಲ. ಕುಸುಮಿತವಾದ ವನವನ್ನು ನೋಡಲು ಬಹು ಕುತೂಹಲವುಂಟು. ಅಪ್ಪಣೆ ಕೊಡಬೇಕು' ಎಂದು ಬೇಡಿ ಕೊಂಡಳು. ದ್ಯುಮತ್ಸೇನನು ಆಕೆಯ ಮಾತಿಗೆ ಪ್ರಸನ್ನನಾದನು. ಆಕೆಯ ತಂದೆ ಆತನಿಗೆ ಆಕೆಯನ್ನು ಸೊಸೆಯನ್ನಾಗಿ ಮಾಡಿ ಹೊರಟು ಹೋದ ಕಾಲದಿಂದ ಹಿಡಿದು ಈವರೆಗೂ ಸಾವಿತ್ರಿ ತನಗಾಗಿ ಯಾವ ಒಂದು ಪ್ರಾರ್ಥನೆ ಮಾಡಿದ್ದೂ ಆತನ ನೆನಪಿಗೆ ಬರಲಿಲ್ಲ. ಆದುದರಿಂದ ಆ ಮಗುವಿನ ಅಭಿಲಾಷೆಯಿದ್ದಂತೆ ಗಂಡನೊಡನೆ ಹೋಗಿ ಬರಲಿ ಎಂದು ಆಕೆಗೆ ಅನುಜ್ಞೆ ಕೊಟ್ಟನು. 'ಮಗಳೆ, ಸತ್ಯವಾನನ ದಾರಿಯಲ್ಲಿ ಯಾವ ಪ್ರಮಾದವೂ ಉಂಟಾಗದಂತೆ ಸರಿಯಾಗಿ ನೋಡಿಕೊ' ಎಂದು ಹೇಳಿದನು.

## ೨

ಗಂಡಹೆಂಡಿರಿಬ್ಬರೂ ಹಿರಿಯರ ಅಪ್ಪಣೆ ಪಡೆದು ವನಕ್ಕೆ ಹೊರಟರು. ಗಂಡನೊಡನೆ ನಗುನಗುತ್ತ ಸಾವಿತ್ರಿ ಮಾತನಾಡುತ್ತಿದ್ದಳು. ಹೃದಯದಲ್ಲಿ ಯೇನೋ ವ್ಯಥೆ. ವನದ ವಿಚಿತ್ರಗಳನ್ನೂ ಚೆಲುವುಗಳನ್ನೂ ಅಲ್ಲಿ ನೋಡಬೇಕಾದ್ದೆಲ್ಲವನ್ನೂ ನೋಡುತ್ತ ಹೋದಳು. ಕಾಡಿನಲ್ಲಿ ನವಿಲು ಕೇಕೆ ಹಾಕಿಕೊಂಡು ತಿರುಗಾಡುವುವು. ಎದುರಿಗೆ ಪುಣ್ಯ ನದಿಗಳು ಹರಿಯುವುವು. ಉದ್ದಕ್ಕೂ ಮರಗಳ ತುಂಬ ಹೂ ಬಿಟ್ಟಿತ್ತು. ಸವಿಮಾತುಗಳಿಂದ ಸತ್ಯವಾನ್ ಅವೆಲ್ಲವನ್ನೂ ಸಾವಿತ್ರಿಗೆ ತೋರಿಸುವನು. ವರ್ಣಿಸುವನು. ಆಕೆ ಗಂಡನನ್ನು ಈ ಎಲ್ಲ ಅವಸ್ಥೆಗಳಲ್ಲಿಯೂ ಸೂಕ್ಷ್ಮವಾಗಿ ನಿರೀಕ್ಷಿಸುತ್ತ ಅವನು ತೋರಿಸಿದುದನ್ನು ನೋಡುತ್ತ ನಡೆಯುತ್ತಿದ್ದಾಳೆ. ನಾರದ ಋಷಿ ಹೇಳಿದ ಕಾಲ ಸಮೀಪಿಸಿದೆ, ಇನ್ನೇನು ಇವನು ಮೃತನಾದನೆಂದೇ ಭಾವಿಸುತ್ತ ಮೃದು ಗಾಮಿನಿಯಾದ ಆಕೆ ಗಂಡನ ಹಿಂದೆ ಮೆಲ್ಲನೆ ನಡೆದಳು. ತನ್ನ ಹೃದಯವನ್ನು ಇಬ್ಭಾಗವಾಗಿ ಮಾಡಿ ಆ ಕ್ಷಣವನ್ನು ಇದಿರುನೋಡುತ್ತಿದ್ದಳು.

ಹೆಂಡತಿಯ ಸಹಾಯದಿಂದ ಸತ್ಯವಾನನು ಅನೇಕ ಹಣ್ಣುಗಳನ್ನು ಸಂಗ್ರಹಿಸಿದನು. ತಾನು ತಂದಿದ್ದ ಪಾತ್ರೆ ಹಣ್ಣಿಂದ ತುಂಬಿತು. ಆಮೇಲೆ ಸೌದೆಯನ್ನು ಸೀಳತೊಡಗಿದನು. ಸೀಳುತ್ತ ಸೀಳುತ್ತ ಆತನ ಮೈ ಬೆವರಿತು. ವ್ಯಾಯಾಮದಿಂದ ತಲೆಯಲ್ಲಿ ವೇದನೆಯುಂಟಾಯಿತು. ಶ್ರಮದಿಂದ ಪೀಡಿತನಾದ ಅವನು ಪ್ರಿಯಳ ಬಳಿಗೆ ಹೋಗಿ ' ಈ ವ್ಯಾಯಾಮದಿಂದ ನನಗೆ ತಲೆನೋವು ಉಂಟಾಗಿದೆ; ಮೈ ಕೈ ನೋಯುತ್ತಿವೆ. ಹೃದಯದಲ್ಲಿ ಸಂಕಟವುಂಟಾಗಿದೆ. ದೇಹದಲ್ಲಿ ಒಟ್ಟು ಅಸ್ವಸ್ಥತೆ ಕಾಣುತ್ತಿದೆ. ಶೂಲದಿಂದ ತಿವಿದ ಹಾಗೆ ತಲೆ ನೋಯುವುದು. ನಿಲ್ಲಲು ಶಕ್ತಿಯಿಲ್ಲ. ಸ್ವಲ್ಪ ಮಲಗಿ ನಿದ್ರೆ ಮಾಡಬೇಕೆನ್ನಿಸುವುದು ' ಎಂದನು. ಸಾವಿತ್ರಿ ಗಂಡನ ಸಮೀಪಕ್ಕೆ ಬಂದಳು. ಆತನನ್ನು ತನ್ನ ಕಡೆಗೆ ಪ್ರೀತಿಯಿಂದ ಕರೆದುಕೊಂಡು ನೆಲದ ಮೇಲೆ ಕುಳಿತು ತನ್ನ ತೊಡೆಯ ಮೇಲೆ ಆತನ ತಲೆಯನ್ನು ಇರಿಸಿಕೊಂಡಳು. ನಾರದರ ವಚನವನ್ನು ಪುನಃ ಪುನಃ ನೆನೆಯುತ್ತ ಒಂದು ಕ್ಷಣದ ವೇಳೆಯನ್ನು ಒಂದು ದಿವಸವೆಂಬಂತೆ ಭಾವಿಸುತ್ತ ಕಳೆದಳು.

ಆ ಕ್ಷಣದಲ್ಲಿ ಪೀತವಸ್ತ್ರವನ್ನು ಧರಿಸಿದ ಒಂದು ಪುರುಷಾಕೃತಿ ಕಾಣಿಸಿತು. ತಲೆಗೆ ತಲೆಗಟ್ಟು ಕಟ್ಟಿದ ಕಟ್ಟಾಳು; ಆದಿತ್ಯ ಸಮವಾದ ತೇಜಸ್ಸು; ಶ್ಯಾಮವರ್ಣ; ರಕ್ತಾಕ್ಷ; ಪಾಶಹಸ್ತ; ರೂಪು ಭಯವನ್ನುಂಟುಮಾಡುವಂತಿತ್ತು. ಕಣ್ಣು ಮುಚ್ಚಿದ್ದ ಸತ್ಯವಾನನ ಪಕ್ಕಕ್ಕೆ ಬಂದು ಆತನನ್ನೇ ನಿರೀಕ್ಷಿಸುತ್ತ ನಿಂತ ಆ ವ್ಯಕ್ತಿಯನ್ನು ಸಾವಿತ್ರಿ ನೋಡಿದಳು. ಗಂಡನ ತಲೆಯನ್ನು ಮೆಲ್ಲಗೆ ಕೆಳಗೆ ಇಳಿಸಿ ಪ್ರಯತ್ನಪೂರ್ವಕವಾಗಿ ಬೇಗ ಎದ್ದಳು. ಕೈ ಮುಗಿದುಕೊಂಡು ಆರ್ತಳಾಗಿ ಹೃದಯದಲ್ಲಿನ ವ್ಯಥೆಯಿಂದ ಹೇಳಿದಳು: 'ನಾನು ಕಾಣುತ್ತಿರುವುದು ಯಾವುದೋ ದೇವತೆಯೆನ್ನಿಸುತ್ತಿದೆ. ಈ ತಮ್ಮ ರೂಪು ಅಷ್ಟು ಅಮಾನುಷವಾಗಿದೆ! ದೇವ, ನೀವಾರು? ನಿಮಗೇನು ಬೇಕು?'

ವ್ಯಕ್ತಿ – ಸಾವಿತ್ರಿ, ನೀನು ಪತಿವ್ರತೆ; ತಪಸ್ವಿನಿ. ಆದುದರಿಂದ ನಿನ್ನೊಡನೆ ಮಾತನಾಡುತ್ತೇನೆ. ನಾನು ಯಮ. ನಿನ್ನ ಗಂಡನಾದ ರಾಜಕುಮಾರ ಸತ್ಯವಾನನ ಆಯುಸ್ಸು ಮುಗಿಯಿತು. ಈತನನ್ನು ಕಟ್ಟಿ ತೆಗೆದುಕೊಂಡು ಹೋಗುತ್ತೇನೆ. ಆ ಉದ್ದೇಶದಿಂದಲೇ ನಾನು ಬಂದಿರುವುದು – (ಇನ್ನಾರನ್ನೂ ಕಳಿಸದೆ ಪಿತೃರಾಜನಾದ ಯಮನೇ ಈ ಕಾರ್ಯಕ್ಕಾಗಿ ಬಂದುದರ ಕಾರಣವನ್ನು ಸಾವಿತ್ರಿಗೆ ವಿವರಿಸುತ್ತ) ಸತ್ಯವಾನನು ಧರ್ಮಸಂಯುಕ್ತನು. ರೂಪವಂತನು. ಗುಣಸಾಗರನು. ಇಂಥವರನ್ನು ತೆಗೆದುಕೊಂಡು ಹೋಗಲು ದೂತರನ್ನು ಕಳಿಸುವುದು ಸರಿಯಲ್ಲವಾದುದರಿಂದ ನಾನೇ ಬಂದಿದ್ದೇನೆ.

– ಹೀಗೆಂದು ಸತ್ಯವಂತನ ದೇಹದಿಂದ ಒಂದು ಹೆಬ್ಬೆರಳು ಗಾತ್ರದ ಜೀವವನ್ನು ಬಲಾತ್ಕಾರದಿಂದ ಮೇಲಕ್ಕೆ ಸೆಳೆದು ಪಾಶದಿಂದ ಕಟ್ಟಿ ತನ್ನ ವಶ ಮಾಡಿಕೊಂಡನು. ಈವರೆಗೂ ಪ್ರಿಯದರ್ಶನವಾಗಿದ್ದ ಸತ್ಯವಾನನ ಶರೀರದಿಂದ ಪ್ರಾಣಹೋಯಿತು. ಶ್ವಾಸವಳಿದು, ಕಾಂತಿ ಕುಂದಿ, ಯಾವ ಚೇಷ್ಟೆಯೂ ಇಲ್ಲದೆ ದೇಹ ಜಡವಾಯಿತು.

ಸತ್ಯವಾನನ ಜೀವವನ್ನು ಪಾಶದಲ್ಲಿ ಕಟ್ಟಿಕೊಂಡ ಯಮನು ದಕ್ಷಿಣ ದಿಕ್ಕಿನಲ್ಲಿ ಪ್ರಯಾಣ ಮಾಡಿದನು. ದುಃಖದಿಂದ ಆರ್ತಳಾದ ಸಾವಿತ್ರಿ ಗಂಡನ ದೇಹವನ್ನು ಸುರಕ್ಷಿತ ಮಾಡಿ ಯಮನ ಹಿಂದೆ ಹಿಂದೆ ನಡೆದಳು.

ಯಮನು ಮುಂದೆ; ನಿಯಮದಿಂದಲೂ ವ್ರತದಿಂದಲೂ ಶುಚಿಯಾಗಿ ಮಹಾತ್ಮಳೂ ಪತಿವ್ರತೆಯೂ ಆದ ಸಾವಿತ್ರಿ ಹಿಂದೆ – ನಡೆದರು. ಇದನ್ನು ಕಂಡ ಯಮರಾಯನು – ಸಾವಿತ್ರಿ, ಹಿಂದಕ್ಕೆ ಹೋಗಿ ಈತನ ಉತ್ತರಕ್ರಿಯಾದಿಗಳನ್ನು ಮಾಡು. ಎಷ್ಟು ದೂರ ಗಂಡನ ಒಡನೆ ಬರಬಹುದೋ ಅಷ್ಟು ದೂರ ನಡೆದು ನೀನು ಗಂಡನ ಋಣವನ್ನು ತೀರಿಸಿದ್ದೀಯೆ.

ಸಾವಿತ್ರಿ – ಯಮರಾಯ, ನನ್ನ ಪತಿಯನ್ನು ನೀನು ಎಲ್ಲಿಗೆ ಕರೆದು ಕೊಂಡು ಹೋಗುತ್ತಿರುವೆಯೋ, ಅಥವಾ ಆತನೇ ಎಲ್ಲಿಗೆ ಹೋಗುತ್ತಿರು ವನೋ ಅಲ್ಲಿಗೆ ನಾನೂ ಹೋಗತಕ್ಕದ್ದು ಸರಿ ; ಅದೇ ನನ್ನಂಥವಳ ಧರ್ಮ. ತಪಸ್ಸು, ಗುರುಭಕ್ತಿ, ಪತಿಸ್ನೇಹ, ವ್ರತ ಇವುಗಳ ಜೊತೆಗೆ ದೇವನಾದ ನಿನ್ನ ಪ್ರಸಾದದ ಬಲ ನನಗೆ ಉಂಟು. ಆದ್ದರಿಂದ ನಾನು ನಿನ್ನ ಹಿಂದೆ ಬರಲು ಯಾವ ತಡೆಯೂ ಇರಲಾರದು. ತತ್ತ್ವಾರ್ಥವನ್ನು ಅರಿತ ವಿದ್ವಾಂಸರು ಏಳು ಹೆಜ್ಜೆ ಜೊತೆಯಲ್ಲಿ ನಡೆದವರು ಮಿತ್ರರೆನ್ನುವರು. ಈ ಮಿತ್ರಧರ್ಮ ವನ್ನು ಅನುಸರಿಸಿ ನಾನಾಡುವ ಸ್ವಲ್ಪ ಮಾತನ್ನು ದಯಮಾಡಿ ಕೇಳು. ಆತ್ಮವಂತರಲ್ಲದವರು ವನವಾಸದಲ್ಲಿ ಯಾವ ವ್ರತನಿಯಮಗಳನ್ನೂ ಆಚರಿಸ ಲಾರರು. ಗುರುಗಳ ಆಶ್ರಮದಲ್ಲಿ ಬ್ರಹ್ಮಚರ್ಯೆಯನ್ನು ಸಾಧಿಸಲಾರರು. ತಿಳಿದವರು ಎಲ್ಲ ಆತ್ಮಜ್ಞಾನಕ್ಕೂ ಧರ್ಮವೇ ಮೂಲವೆನ್ನುವರು. ಬ್ರಹ್ಮಚರ್ಯ ಸಂನ್ಯಾಸಗಳು ನನ್ನ ಇಚ್ಛೆಯವಲ್ಲ. ಸಂಸಾರದಲ್ಲಿ ದಾಂಪತ್ಯವೇ ಪ್ರಧಾನ ವೆಂದು ಸಂತರು ಹೇಳಿದ್ದಾರೆ. ಅದರ ಧರ್ಮವೇ ಶ್ರೇಷ್ಠವೆಂದು ನಾನು ಭಾವಿಸಿದ್ದೇನೆ. ಆದುದರಿಂದ ನನ್ನ ಧರ್ಮವು ನಷ್ಟವಾಗದಂತೆ ಮಾಡು. ಹಿರಿಯರು ಹೇಳಿದಂತೆ ಆ ಒಂದು ದಾರಿಯಲ್ಲಿ ನಡೆಯಲು ನನಗೆ ನೆರವಾಗು.

ಯಮ – ಸಾವಿತ್ರಿ, ನಿನ್ನ ಮಾತುಗಳನ್ನು ಕೇಳಿ ತುಂಬ ಸಂತುಷ್ಟ ನಾಗಿದ್ದೇನೆ. ಸ್ವರ ವ್ಯಂಜನ ಅಕ್ಷರಗಳಿಂದ ಕೂಡಿ ಶುದ್ಧ ಉಚ್ಚಾರಣೆ ಯಿಂದ ಕೂಡಿದ ನಿನ್ನ ಮಾತು ಕೇಳಲು ಬಹು ಸವಿಯಾಗಿದೆ. ವರವನ್ನು ಕೇಳಿಕೋ. ನಿನ್ನ ಗಂಡನ ಜೀವಿತ ಒಂದನ್ನು ಹೊರತು ಉಳಿದ ಯಾವುದ ನ್ನಾದರೂ ಕೊಡುತ್ತೇನೆ.

ಸಾವಿತ್ರಿ – ನನ್ನ ಮಾವಂದಿರು ಸ್ವರಾಜ್ಯ ಚ್ಯುತರಾಗಿದ್ದಾರೆ. ವನವಾಸವನ್ನಾಶ್ರಯಿಸಿದ್ದಾರೆ. ಕಣ್ಣು ಕಳೆದುಕೊಂಡಿದ್ದಾರೆ. ಅವರಿಗೆ ಕಣ್ಣು ಪುನಃ ಬರಲಿ. ಅವರು ಪುನಃ ಬಲಿಷ್ಠರಾಗಿ, ನಿನ್ನ ಪ್ರಸಾದದಿಂದ ಸೂರ್ಯನಂತೆ ಜ್ವಲಿಸುವ ತೇಜಸ್ಸುಳ್ಳವರಾಗಲಿ.

ಯಮ – ನೀನು ಕೇಳಿದಂತೆ ಆಗುವುದು; ಆ ವರವನ್ನು ಕೊಟ್ಟಿದ್ದೇನೆ. ದಾರಿ ನಡೆದು ನಿನಗೆ ಬಹಳ ಆಯಾಸವಾಗಿರುವಂತೆ ಕಾಣುತ್ತದೆ. ಇನ್ನು ಹೆಚ್ಚಿನ ಶ್ರಮ ಬೇಡ. ಹಿಂದಿರುಗು.

ಸಾವಿತ್ರಿ – ಗಂಡನ ಬಳಿಯಲ್ಲಿರುವ ನನಗೆ ಶ್ರಮವೆಲ್ಲಿಯದು ? ಆತನನ್ನು ನೀನು ಎಲ್ಲಿಗೆ ಕರೆದುಕೊಂಡುಹೋಗುತ್ತಿರುವೆಯೋ ಅಲ್ಲಿಗೆ ನಾನೂ ಬರುವವಳು. ಆತನ ಗತಿಯೇ ನನಗೆ ಗತಿ. ಸಜ್ಜನರ ಸಂಗತಿಯನ್ನು ಸ್ವಲ್ಪವಾದರೂ ಬಯಸಿ ಮಾಡುವುದು ಉತ್ತಮವಾದ ಕೆಲಸ. ಆಗ ಆ ಸತ್ಪುರುಷರೇ ಪರಮ ಮಿತ್ರರಾಗುವರು. ಸತ್ಪುರುಷರ ಸಹವಾಸ ಎಂದಿಗೂ ಅಫಲವಲ್ಲ. ಎಲ್ಲಿ ಸತ್ಪುರುಷರು ಇರುವರೋ ಅಲ್ಲಿ ವಾಸ ಮಾಡಬೇಕು.

ಯಮ – ನಿನ್ನ ಮಾತು ಮನಸ್ಸಿಗೆ ಅನುಕೂಲವಾದದ್ದು. ಬುಧರ ಬುದ್ಧಿಯನ್ನು ವೃದ್ಧಿಗೊಳಿಸುವಂಥಾದ್ದು. ಮನುಷ್ಯನ ಹಿತಕ್ಕೆ ಇಂಥ ಮಾತುಗಳೇ ಆಶ್ರಯ. ಪುನಃ ಹೇಳುತ್ತೇನೆ: ಸತ್ಯವಾನನ ಪ್ರಾಣ ಒಂದು ಹೊರತು ಬೇರೆ ಯಾವುದನ್ನಾದರೂ ಬೇಡಿಕೋ. ಎರಡನೆಯ ವರವನ್ನು ಕೊಡುತ್ತೇನೆ.

ಸಾವಿತ್ರಿ – ನನ್ನ ಮಾವಂದಿರ ರಾಜ್ಯವನ್ನು ಹಗೆಗಳು ಅಪಹರಿಸಿದ್ದಾರಲ್ಲವೇ. ಅವರ ರಾಜ್ಯ ಅವರಿಗೆ ಪುನಃ ಬರಲಿ. ಅವರು ಸ್ವಧರ್ಮವನ್ನು ನಡಸಲು ಶಕ್ಯವಾಗುವಂತೆ ನೆರವೇರಿಸಿಕೊಡು.

ಯಮ – ನೀನು ಹೇಳುವಂತೆಯೇ ಆಗಲಿ. ಆ ಮಹಾರಾಜನಿಗೆ ಕಳೆದುಹೋದ ತನ್ನ ರಾಜ್ಯ ಬೇಗ ಹಿಂದಿರುಗಿ ಬರುವುದು. ಸ್ವಧರ್ಮದಲ್ಲಿ ಅವನು ಪುನಃ ಸ್ಥಾಪಿತನಾಗಿ ದಕ್ಷನಾಗುವನು. ರಾಜಕುಮಾರಿ, ನಿನ್ನ ಇಷ್ಟವನ್ನು ನೆರವೇರಿಸಿದ್ದೇನೆ. ಇನ್ನು ಹಿಂದಕ್ಕೆ ಹೋಗು.

ಸಾವಿತ್ರಿ – ಕರ್ಮದಲ್ಲಿ, ಮನಸ್ಸಿನಲ್ಲಿ ಯಾವ ಪ್ರಾಣಿಗೂ ದ್ರೋಹ

ಮಾಡದಿರುವುದು, ಅನುಗ್ರಹ ಬುದ್ಧಿ, ದಾನ ಬುದ್ಧಿ – ಇವೇ ಎಂದಿಗೂ ಸನಾತನಧರ್ಮವೆನ್ನುವರು. ಸಂತರಾದವರು ಹಗೆಗಳಲ್ಲಿ ಕೂಡ ದಯೆ ತೋರುವರು. ಇನ್ನು ನನ್ನಂಥ ಸಾಮಾನ್ಯ ದುರ್ಬಲ ಮನುಷ್ಯಳಲ್ಲಿ ನಿನ್ನಷ್ಟು ಹಿರಿಯ ಸತ್ಪುರುಷರು ದಯೆ ತೋರದೆ ಇರುವರೆ ?

ಯಮ – ನೀನು ಈಗಾಡಿದ ಮಾತುಗಳು ಬಾಯಾರಿದವರಿಗೆ ಕೊಟ್ಟ ನೀರಿನಂತೆ ಆಪ್ಯಾಯನವನ್ನುಂಟುಮಾಡುತ್ತವೆ. ಪುನಃ ಹೇಳುತ್ತೇನೆ ಕೇಳು. ಸತ್ಯವಾನನ ಜೀವವೊಂದು ಹೊರತು ನಿನ್ನಿಚ್ಛೆ ಬಂದ ಇನ್ನೊಂದು ವರವನ್ನು ಕೇಳಿಕೋ, ಕೊಡುತ್ತೇನೆ.

ಸಾವಿತ್ರಿ – ಮಹಾರಾಜನಾದ ನನ್ನ ತಂದೆಗೆ ಗಂಡು ಸಂತಾನವಿಲ್ಲ. ಆತನಿಗೆ ಔರಸರಾದ – ಅವನ ಕುಲವನ್ನು ಬೆಳಸುವ – ನೂರು ಮಂದಿ ಪುತ್ರರು ಹುಟ್ಟುವಂತಾಗಲಿ.

ಯಮ – ಆಗಲಿ ನೀನು ಹೇಳಿದಂತೆ ವರ್ಚಸ್ವಿಗಳಾದ ನೂರು ಜನ ಗಂಡುಮಕ್ಕಳು ನಿನ್ನ ತಂದೆಗೆ ಹುಟ್ಟುವರು. ನಿನ್ನ ಇಷ್ಟ ನೆರವೇರಿತಲ್ಲ! ದಾರಿ ಬಹುದೂರ ನಡೆದು ಬಂದಿರುವೆ. ಇನ್ನಾದರೂ ಹಿಂದಿರುಗು.

ಸಾವಿತ್ರಿ – ಗಂಡನ ಸನ್ನಿಧಿಯಲ್ಲಿರುವ ನನಗೆ ದೂರವೆಂದರೇನು? ನನ್ನ ಮನಸ್ಸು ಇನ್ನೂ ಹೆಚ್ಚು ದೂರಕ್ಕೆ ಓಡುತ್ತಿದೆ. ನೀನು ಮುಂದೆ ಹೋಗುತ್ತಿರುವಹಾಗೆಯೇ ನಾನು ಕೊರಲೆತ್ತಿ ಗಟ್ಟಿಯಾಗಿ ಹೇಳುವ ಮಾತುಗಳು ನಿನಗೆ ಕೇಳಿಸಿದರೆ ಸಾಕು. ನೀನು ಸೂರ್ಯದೇವನ ಮಗ. ಪ್ರತಾಪಶಾಲಿ. ಶಮದಿಂದಲೂ ಧರ್ಮದಿಂದಲೂ ನಿನ್ನ ಪ್ರಜೆಗಳನ್ನು ರಂಜಿಸುತ್ತಿದ್ದೀಯೆ. ಆದ್ದರಿಂದ ನೀನು ಧರ್ಮರಾಜನೆಂಬ ಹೆಸರಿಗೆ ತಕ್ಕ ಒಡೆಯನು. ಸತ್ಪುರುಷರಲ್ಲಿ ನಮಗಿರುವ ವಿಶ್ವಾಸ ನಮ್ಮಲ್ಲೇ ನಮಗಿರುವುದಿಲ್ಲ. ಆದುದರಿಂದಲೇ ಎಲ್ಲರೂ ವಿಶೇಷವಾಗಿ ಸಜ್ಜನರ ಪ್ರೀತಿಯನ್ನೂ ಸಂಗವನ್ನೂ ಬಯಸುವರು.

ಯಮ – ನಿನ್ನಿಂದಲ್ಲದೆ ಬೇರೆ ಯಾರಿಂದಲೂ ಇಂಥ ಮಾತುಗಳನ್ನು ನಾನು ಕೇಳಿಲ್ಲ. ಈ ನಿನ್ನ ಮಾತುಗಳಿಂದ ನನಗೆ ಸಂತೋಷವಾಗಿದೆ.

ನಿನ್ನ ಗಂಡನ ಪ್ರಾಣ ಒಂದನ್ನು ಹೊರತು ಬೇರೆ ಏನನ್ನಾದರೂ ಕೇಳಿಕೋ; ನಾಲ್ಕನೆಯ ವರವನ್ನು ಕೊಡುತ್ತೇನೆ. ಅದನ್ನು ತೆಗೆದುಕೊಂಡು ಹೊರಟುಹೋಗು.

ಸಾವಿತ್ರಿ – ಸತ್ಯವಂತನ ಔರಸರಾಗಿ ನನ್ನ ಹೊಟ್ಟೆಯಲ್ಲಿ ಹುಟ್ಟಿ ನಮ್ಮಿಬ್ಬರ ಕುಲಗಳನ್ನೂ ಬೆಳಸತಕ್ಕ ಬಲವೀರ್ಯಶಾಲಿಗಳಾದ ನೂರು ಮಕ್ಕಳಾಗುವಂತೆ ಅನುಗ್ರಹಿಸು

ಯಮ – ಬಲವೀರ್ಯಶಾಲಿಗಳಾದ ನೂರು ಜನ ಗಂಡು ಮಕ್ಕಳು ನಿನಗೆ ಆಗಿ ಪ್ರೀತಿಯನ್ನುಂಟುಮಾಡುವರು. ನಿನಗೆ ಮಾರ್ಗಾಯಾಸವಾಗಿದೆ ಸಾವಿತ್ರಿ. ಇನ್ನು ಹೋಗು.

ಸಾವಿತ್ರಿ – ನಿನ್ನಂಥ ಸಜ್ಜನನ ದಯೆ ನನಗಿರುವಾಗ ನನಗೆ ಆಯಾಸ ವೆಲ್ಲಿಯದು? ಸಜ್ಜನರು ಎಂದಿಗೂ ಧರ್ಮವೃತ್ತಿಯುವರು. ಎಂದಿಗೂ ಅಧೀರರಾಗರು. ವ್ಯಥೆಪಡರು. ಎಂದಿಗೂ ಅವರ ಸಂಗ ನಿಷ್ಫಲವಾಗದು. ಸಜ್ಜನರಿಂದ ಯಾರಿಗೂ ಯಾವ ಭಯವೂ ಇಲ್ಲ. ಸಂತರ ಸತ್ಯವೇ ಸೂರ್ಯನನ್ನು ಸತ್ಯಮಾರ್ಗದಲ್ಲಿ ನಡಸುತ್ತಿರುವುದು. ಸಂತರ ತಪಸ್ಸೇ ಭೂಮಿಯನ್ನು ದೃಢವಾಗಿ ಹಿಡಿದಿರುವುದು. ಭೂತ ಭವಿಷ್ಯತ್ತುಗಳಿಗೂ ಅವರೇ ಗತಿ. ಅವರ ನಡುವೆ ಇರುವ ಸಜ್ಜನರಿಗೆ ಯಾವ ಬಗೆಯ ಕೇಡೂ ಉಂಟಾಗದು. ಇದೇ ಆರ್ಯರಿಗೆ ಯುಕ್ತವಾದ ಶಾಶ್ವತವಾದ ನಡತೆ. ಸಂತರು ಏನು ಮಾಡಿದರೂ ಪರಾರ್ಥವಾಗಿಯೇ ಮಾಡುವರು. ಪ್ರತ್ಯುಪಕಾರವನ್ನು ಬಯಸರು. ಅವರ ಪ್ರಸನ್ನತೆ ಕೆಡದು. ಅವರಿಂದ ಯಾವ ಅರ್ಥಹಾನಿ ಮಾನಹಾನಿಯೂ ಆಗುವುದಿಲ್ಲ. ಈ ಗುಣಗಳೇ ಸತ್ಪುರುಷರ ನಿತ್ಯಲಕ್ಷಣ. ಆದ್ದರಿಂದಲೇ ಸಜ್ಜನರು ಲೋಕಸಂರಕ್ಷಕ ರಾಗುವುದು.

ಯಮ – ಸಾವಿತ್ರಿ, ಧರ್ಮವನ್ನು ಕುರಿತ ಈ ಮಾತುಗಳನ್ನು ನೀನು ಹೇಗೆ ಹೇಗೆ ನುಡಿಯುತ್ತಿರುವೆಯೋ ಹಾಗೆ ಹಾಗೆ ಅವನ್ನು ಕೇಳಲು ಮನಸ್ಸಿಗೆ ಹರ್ಷವಾಗುವುದು. ನೀನಾಡುವ ಈ ಸುಪದಗಳ ಅರ್ಥ ದೊಡ್ಡದು. ಅವನ್ನು ಕೇಳಿದಷ್ಟೂ ನನಗೆ ನಿನ್ನಲ್ಲಿ ಭಕ್ತಿ ಉಂಟಾಗಿದೆ.

ಓ! ಪತಿವ್ರತೆ, ಇನ್ನು ಬೇರೆ ಇಂಥದಿನ್ನೊಂದಿಲ್ಲವೆಂಬಂತಹ ವರವನ್ನು ಬೇಡಿಕೋ. ಕೊಡುತ್ತೇನೆ.

ಸಾವಿತ್ರಿ – ಸುಕೃತದೊಡನೆ ಬೆರೆಯದುಬಾದರೆ ನನಗೆ ಸದ್ಗತಿಯೂ ಬೇಡ. ಮಾನದಾತನಾದ ಯಮರಾಯ, ಪತಿಯನ್ನು ಬಿಟ್ಟು ನಾನು ಮೃತಳಂತೆ ಮಾತ್ರ ಆದೇನು. ಸತ್ಯವಾನನು ಜೀವಿಸುವಂತೆ ವರವನ್ನು ಕೊಡು ಎಂದು ಮಾತ್ರ ನಾನು ನಿನ್ನನ್ನು ಬೇಡಿಯೇನು. ಪತಿಯನ್ನು ಬಿಟ್ಟು ನನಗೆ ಯಾವ ಸುಖವೂ ಬೇಡ. ಪತಿಯ ಹೊರತಾದ ಯಾವ ಸ್ವರ್ಗಲೋಕವೂ ಬೇಡ. ಯಾವ ಸಂಪತ್ತೂ ಬೇಡ. ಪತಿವಿಹೀನಳಾಗಿ ನನಗೆ ಜೀವನದ ವ್ಯವಸಾಯವೇ ಬೇಡ. ನಿನ್ನ ವರವೊಂದು ನನಗೆ ನೂರು ಗಂಡು ಮಕ್ಕಳ ದಾನ ಮಾಡಿದೆ. ಆದರೆ ನನ್ನ ಗಂಡನನ್ನು ನೀನು ಅಪಹರಿಸುತ್ತಿರುವೆ. ಈಗ ನೀನು ಹೇಳಿದ ವಿಶೇಷ ವರವನ್ನು ಬೇಡುತ್ತೇನೆ: ಸತ್ಯವಂತನು ಜೀವಿಸಲಿ. ನೀನಾಡಿದ ಮಾತುಗಳು ಸತ್ಯವಾಗಲಿ!

ಯಮನು ಬೇರೆ ದಾರಿ ಕಾಣದೆ ಸಾವಿತ್ರಿಯ ಮಾತಿಗೆ ಒಪ್ಪಿಕೊಂಡನು. 'ಸಾವಿತ್ರಿ, ನೀನು ಹೇಳಿದಂತೆ ಆಗಲಿ' ಎಂದು ವೈವಸ್ವತ ಯಮನು ತಾನು ಕಟ್ಟಿದ್ದ ಪಾಶವನ್ನು ಬಿಚ್ಚಿ ಸತ್ಯವಾನನ ಜೀವವನ್ನು ಬಿಡುಗಡೆ ಮಾಡಿದನು. ಪ್ರಹೃಷ್ಟಾತ್ಮನಾಗಿ ಧರ್ಮರಾಜನು ಸಾವಿತ್ರಿಯನ್ನು ಕುರಿತು ಹೀಗೆ ಹೇಳಿದನು:

'ಕುಲಕ್ಕೆ ಆನಂದವನ್ನು ತರುವ ಓ ಭದ್ರೆ! ಇಗೋ ನಿನ್ನ ಗಂಡನನ್ನು ಬಿಡುಗಡೆ ಮಾಡಿದ್ದೇನೆ. ಆತನು ಬೇಗ ಆರೋಗ್ಯವಂತ ನಾಗುವನು; ನೀನು ನಡಸಿದಂತೆ ನಡೆಯುತ್ತ ಸಿದ್ಧಾರ್ಥನಾಗುವನು. ನಿನ್ನೊಡನೆ ನಾಲ್ಕು ನೂರು ವರ್ಷಗಳ ಕಾಲ ಸುಖವಾಗಿ ಬಾಳುವನು. ಇಷ್ಟಯಜ್ಞಗಳಿಂದಲೂ ಧರ್ಮಗಳಿಂದಲೂ ಖ್ಯಾತಿ ಪಡೆಯುವನು. ಆತನಿಗೆ ನಿನ್ನಲ್ಲಿ ನೂರು ಜನ ಗಂಡು ಮಕ್ಕಳು ಹುಟ್ಟುವರು. ನಿನ್ನ ಪುತ್ರ ಪೌತ್ರರು ನಿನ್ನ ಹೆಸರನ್ನು ಪಡೆದು ಮುಂದಿನ ಕಾಲಗಳಲ್ಲಿ ಖ್ಯಾತಿವಂತರಾಗಿ ಬಾಳುವರು. ನಿನ್ನ ತಾಯಿ ಮಾಳವಿಯಲ್ಲಿ ನಿನ್ನ

ತಂದೆಗೆ ನೂರು ಮಂದಿ ಗಂಡು ಮಕ್ಕಳು ಹುಟ್ಟಿ ದೇವತೆಗಳಿಗೆ ಸಮನಾದಂಥ ಕ್ಷತ್ರಿಯರಾಗಿ ನಿನಗೆ ಸೋದರರಾಗುವರು.'
– ಹೀಗೆ ಹೇಳಿ ಆಕೆಯನ್ನು ಹರಸಿ ಸಂತೋಷದಿಂದ ಬೀಳ್ಕೊಂಡು ತನ್ನ ಪಟ್ಟಣಕ್ಕೆ ಹಿಂದಿರುಗಿದನು.

ಇತ್ತ ಸಾವಿತ್ರಿ ತನ್ನ ಗಂಡನ ಮೃತ ಕಳೇಬರವಿದ್ದ ಕಡೆಗೆ ಹಿಂದಿರುಗಿ ಬಂದಳು. ದೇಹ ಮೊದಲಂತೆಯೇ ನೆಲದ ಮೇಲೆ ಬಿದ್ದಿತ್ತು. ಅಲ್ಲಿಂದೆತ್ತಿ ದೇಹವನ್ನು ಮೆಲ್ಲಗೆ ಪುನಃ ತನ್ನ ಬಳಿಗೆ ತೆಗೆದುಕೊಂಡಳು. ಮೃದುವಾಗಿ ತನ್ನ ತೊಡೆಯ ಮೇಲೆ ಗಂಡನ ತಲೆಯನ್ನು ಇರಿಸಿಕೊಂಡು ನೆಲದ ಮೇಲೆ ಕುಳಿತಳು. ಸ್ವಲ್ಪ ಸಮಯದಲ್ಲಿಯೇ ಸತ್ಯವಾನನಲ್ಲಿ ಜೀವಸಂಜ್ಞೆಯುಂಟಾಯಿತು. ಬೇರೆ ಪ್ರದೇಶಕ್ಕೆ ಪ್ರಯಾಣ ಹೋಗಿ ಹಿಂದಕ್ಕೆ ಬಂದವನಂತೆ ಪ್ರೇಮದಿಂದ ಪುನಃ ಪುನಃ ಆಕೆಯನ್ನು ನೋಡಿ, 'ಸಾವಿತ್ರೀ' ತುಂಬಾ ಹೊತ್ತು ನಾನು ನಿದ್ರೆ ಮಾಡಿಬಿಟ್ಟೆನಲ್ಲವೆ? ನನ್ನನ್ನು ಇನ್ನೂ ಮುಂಚೆ ಏಕೆ ಎಚ್ಚರಗೊಳಿಸಲಿಲ್ಲ? ನನ್ನನ್ನು ಎಳೆದುಕೊಂಡು ಹೋಗುವಂತಿದ್ದ ಶ್ಯಾಮವರ್ಣದ ಆ ಪುರುಷನು ಯಾರು? ಅವನು ಎಲ್ಲಿಗೆ ಹೋದನು?' ಎಂದು ಪ್ರಶ್ನೆ ಮಾಡಿದನು.

೩

ಸತ್ಯವಾನನು ದೀರ್ಘಕಾಲ ನಿದ್ರೆಮಾಡಿ, ವಿಶ್ರಾಂತಿಪಡೆದನೆಂದು ಎಣಿಸಿ 'ಆ ಬಂದಿದ್ದ ಕರಿಯ ಮನುಷ್ಯನು ಯಮನು; ಆತನು ಹೊರಟು ಹೋದನು. ಈಗ ದೇಹದಲ್ಲಿ ನಿಮಗೆ ಶಕ್ತಿ ಇದ್ದರೆ ಏಳಬಹುದು. ರಾತ್ರಿಯ ಕತ್ತಲು ಹೆಚ್ಚುತ್ತಿದೆ' ಎಂದು ಸಾವಿತ್ರಿ ಗಂಡನಿಗೆ ತಿಳಿಸಿದಳು. ಸತ್ಯವಾನನಿಗೆ ತಾನು ಸಾವಿತ್ರಿಯೊಡನೆ ಕಾಡಿಗೆ ಬಂದುದು, ಹಣ್ಣು ಹಂಪಲ ಆಯ್ದುದು, ಸೌದೆ ಸೀಳಲು ತೊಡಗಿ ಆಯಾಸಗೊಂಡುದು, ತಲೆಶೂಲೆ ಬಂದು ಹೆಂಡತಿಯ ಆಶ್ರಯ ಪಡೆದು ಮಲಗಿದುದು, ಕಣ್ಣೆದುರಿಗೆ ಶ್ಯಾಮ ವರ್ಣದ ಪುರುಷಾಕೃತಿ ಕಂಡುದು ಇಷ್ಟು ಮಟ್ಟಿಗೆ ನೆನಪಿತ್ತು. ಮುಂದೆ

ಏನಾಯಿತೊ ಹೋಯಿತೊ ಆ ಯಾವುದೂ ತಿಳಿಯದು. ಮಹೌಜಸವಾದ ಆ ಘೋರಾಕೃತಿ ಯಮನೆಂಬುದಾಗಲಿ ತನ್ನ ಜೀವ ಹೋಗಿತ್ತೊ ಬಿಟ್ಟಿತ್ತೊ ಎಂಬುದಾಗಲಿ, ತಾನು ಇದನ್ನೆಲ್ಲ ಕಂಡುದು ಸ್ವಪ್ನದಲ್ಲಿಯೊ ನಿಜವಾಗಿಯೊ ಎಂಬುದಾಗಲಿ ಅವನಿಗೆ ಖಚಿತವಾಗಿ ಅರಿವಿಲ್ಲ. ಕತ್ತಲು ದಟ್ಟವಾಗುತ್ತಿರಲು ಈ ಸನ್ನಿವೇಶದ ಎಲ್ಲ ವೃತ್ತಾಂತವನ್ನೂ ವಿಸ್ತಾರವಾಗಿ ತಿಳಿಸಲು ಸಾವಿತ್ರಿಗೆ ಸಮಯವಿರಲಿಲ್ಲ. 'ತಂದೆತಾಯಿಗಳನ್ನು ನೋಡಲು ನಿಮಗೆ ಇಚ್ಛೆಯಿದ್ದರೆ ಏಳಿ, ಸೂರ್ಯನು ಮುಳುಗಿ ಬಹಳ ಹೊತ್ತಾಯಿತು. ನಿಶಾಚರರು ಸಂಚಾರ ತೊಡಗಿರುವಂತೆ ಕಾಣುತ್ತಿದೆ. ಅವರ ಕ್ರೂರಭಾಷೆ ಕೇಳಿಸುತ್ತಿದೆ. ಕಾಡುಮೃಗಗಳು ಸಂಚರಿಸುತ್ತಿರುವಂತೆ ಎಲೆಗಳ ಶಬ್ದ ಕೇಳುತ್ತಿದೆ. ಘೋರನಾದದಿಂದ ದಕ್ಷಿಣದಲ್ಲಿಯೂ ಪಶ್ಚಿಮದಲ್ಲಿಯೂ ನರಿಗಳು ಊಳುತ್ತಿವೆ. ಈ ಉಗ್ರಗಳನ್ನು ಕಂಡು ನನಗೆ ನಡುಕವುಂಟಾಗಿದೆ. ತಂದೆತಾಯಿಗಳನ್ನು ಇಂದೇ ನೋಡುವ ಅಪೇಕ್ಷೆ ಇದ್ದರೆ ಇಲ್ಲಿಂದ ಹೊರಡುವುದು ಉತ್ತಮ' ಎಂದಳು. ಕತ್ತಲಲ್ಲಿ ವನದ ಭೀಕರತೆ ಹೆಚ್ಚಿರುವುದನ್ನು ಸತ್ಯವಾನನು ಕಂಡನು. ಮುಂದೆ ಸಾವಿತ್ರಿಗೆ ದಾರಿಗಳ ಗುರುತು ಸಿಕ್ಕಲಾರದು ಎಂದು ಅವನಿಗೆ ತೋರಿತು. ಇತ್ತ ಇಲ್ಲಿಂದ ನಡೆದು ಹೋಗಿ ಆಶ್ರಮವನ್ನು ಸೇರುವಷ್ಟು ಶಕ್ತಿ ಉತ್ಸಾಹ ಗಂಡನಿಗೆ ಇವೆಯೊ ಇಲ್ಲವೊ ಎಂಬ ಶಂಕೆ ಆಕೆಗಿತ್ತು. 'ದಾರಿ ನಡೆಯಲು ಶ್ರಮವೇನೊ ಆಗುವುದು. ಗುರು ಜನಗಳನ್ನು ಸ್ವಲ್ಪ ತಡೆದು ಕಾಣುವ ಅವಕಾಶವಿದ್ದರೆ – ನಿಮಗೆ ಆಯಾಸವಾಗಿದ್ದರೆ ಈ ರಾತ್ರಿಯನ್ನು ಇಲ್ಲಿಯೇ ಕಳೆದು ನಾಳೆ ಬೆಳಿಗ್ಗೆ ಇಲ್ಲಿಂದ ಹೋದರಾಯಿತು. ಒಣಗಿದ ಮರ ಕಾಡಿನಲ್ಲಿ ಹೊತ್ತಿ ಅಲ್ಲಲ್ಲಿ ಉರಿಯುತ್ತಿರುವುದು. ಅಲ್ಲಿಂದ ಕಿಚ್ಚನ್ನು ತಂದು ಬೆಳಕನ್ನೂ ಶಾಖವನ್ನೂ ಮಾಡೋಣ' ಎಂದು ಸಾವಿತ್ರಿ ಸೂಚಿಸಿದಳು.

ಆದರೆ ಆಶ್ರಮಕ್ಕೆ ಹಿಂದಿರುಗದೆ ರಾತ್ರಿಯೆಲ್ಲ ಕಾಡಿನಲ್ಲಿ ಕಳೆಯಲು ಸತ್ಯವಾನನು ಸಮ್ಮತಿಸಲಿಲ್ಲ. 'ಈಗ ನನಗೆ ತಲೆನೋವಿಲ್ಲ. ಅಂಗಾಂಗಗಳೆಲ್ಲ ಸ್ವಸ್ಥವಾಗಿವೆ. ನೀನು ಸಹಾಯ ಮಾಡಿದರೆ ಈಗಲೇ ಹೋಗಿ ತಾಯಿತಂದೆಗಳನ್ನು ಸೇರಿಕೊಳ್ಳಬೇಕೆಂಬ ಇಚ್ಛೆಯುಂಟು. ಈವರೆಗೆ

ಎಂದೂ ಸಂಜೆಯಾದ ಮೇಲೆ ನಾನು ಆಶ್ರಮವನ್ನು ಬಿಟ್ಟು ಹೊರಗಿದ್ದುದಿಲ್ಲ. ಸಂಜೆಯ ಸಮಯಕ್ಕೆ ಬಾರದಿದ್ದರೆ ತಾಯಿ ನನಗಾಗಿ ಹಂಬಲಿಸುವಳು. ಹಗಲು ಹೊತ್ತು ಹೆಚ್ಚು ಕಾಲ ಕಾಣದಿದ್ದರೆಯೇ ತಂದೆಗೆ ತುಂಬ ಕಳವಳ ಉಂಟಾಗುವುದು. ಆಶ್ರಮವಾಸಿಗಳ ಬಳಿಗೆಲ್ಲ ಹೋಗಿ ನನ್ನನ್ನು ಕುರಿತು ವಿಚಾರ ಮಾಡುವರು. ಹಿಂದೆ ಅನೇಕ ವೇಳೆ ಹೀಗೆ ಮಾಡಿದ್ದಾರೆ. ಈವರೆಗಾಗಲೇ ನಾವು ಬಾರದಿರುವುದನ್ನು ಕಂಡು ಬಹುವಾಗಿ ಅವರು ಕಂಗಾಲಾಗಿರಬೇಕು. ನನ್ನ ಜೊತೆಯಲ್ಲಿ ಇಂದು ನೀನೂ ಅದೃಶ್ಯಳಾಗಿರುವುದನ್ನು ಕಂಡು ಅವರಿಗೆ ಮಹದ್ದುಃಖವೇ ಉಂಟಾಗಿರುತ್ತದೆ. ವೃದ್ಧರಾದ ಪ್ರೀತಿವಂತರಾದ ಆ ತಾಯಿತಂದೆಗಳು ಒಂದು ಸಲ, 'ನೀನಿಲ್ಲದೆ ಒಂದು ಮುಹೂರ್ತ ಕಾಲ ನಾವು ಬದುಕಲಾರೆವು, ಮಗನೆ' ಎಂದುದುಂಟು. 'ಮುದುಕರೂ ಕುರುಡರೂ ಆದ ನಮಗೆ ನೀನೇ ಊರೆಗೋಲು, ನಿನ್ನಿಂದ ನಮ್ಮ ವಂಶ ಪ್ರತಿಷ್ಠಿತವಾಗಿದೆ' ಎಂದಿದ್ದಾರೆ. ಇಂತಹ ರಾತ್ರಿಯಲ್ಲಿ ನಾವಿಬ್ಬರೂ ಕಾಣದಂತಾಗಿರುವುದರಿಂದ ಅವರು ಈಗಾಗಲೆ ಯಾವ ಅವಸ್ಥೆಗೆ ಸಂದಿದ್ದಾರೋ! ಅವರಿಗೆ ನನ್ನ ವಿಚಾರದಲ್ಲಿ ಹೇಗೋ ನನಗೂ ಅವರನ್ನು ಕುರಿತು ಹಾಗೆಯೇ: ಅವರನ್ನು ಬಿಟ್ಟು ಬದುಕಲು ಉತ್ಸಾಹವಿಲ್ಲ. ನನಗಾಗಿ ನಾನು ಶೋಕಪಡುತ್ತಿಲ್ಲ. ಮುದುಕರಾದ ತಾಯಿತಂದೆಯರು ಈಗ ಪಡುತ್ತಿರಬಹುದಾದ ಕಷ್ಟದ ಚಿಂತೆ ದುರ್ಭರವಾಗಿದೆ. ನನಗಾಗಿ ಪರಿತಪಿಸುತ್ತಿರುವ ಅವರ ಮನಸ್ಸನ್ನು ನೆಮ್ಮದಿ ಪಡಿಸದೆ ಇರಲಾರೆನು. ಆ ಇಬ್ಬರೂ ಈಗ ಏನಾಗಿರುವರೋ. ಅವರು ಬದುಕಿದ್ದರೆ ಅವರ ಪೋಷಣೆಯನ್ನು ಅವರಿಗೆ ಪ್ರೀತಿಯುಂಟಾಗುವಂತೆ ಮಾಡಬೇಕೆಂದು ಇದೆ.'– ಹೀಗೆ ಹೇಳಿ ಗುರುಪ್ರಿಯನೂ, ಗುರುವರ್ತಿಯೂ, ಧರ್ಮಾತ್ಮನೂ ಆದ ಸತ್ಯವಾನನು ದುಃಖದಿಂದ ಆರ್ತನಾಗಿ ತನ್ನ ಎರಡೂ ತೋಳನ್ನು ಮೇಲೆತ್ತಿ ಗಟ್ಟಿಯಾಗಿ ಅಳತೊಡಗಿದನು.

ಶೋಕದಿಂದ ಹೀಗೆ ಕಂಗೆಟ್ಟ ಗಂಡನ ಕಣ್ಣೀರನ್ನು ಒರಸಿ ಸಾವಿತ್ರಿ ಸಮಾಧಾನ ಮಾಡಿದಳು. 'ನಾನು ಸ್ವಲ್ಪವಾದರೂ ತಪಸ್ಸು ಮಾಡಿರುವುದು ನಿಜವಾದರೆ, ಅಗ್ನಿಗೆ ಕ್ರಮವಾಗಿ ಹವಿಸ್ಸುಗಳನ್ನು ಅರ್ಪಿಸಿರುವೆ

ನಾದರೆ, ನಾನು ಸತ್ಯವಂತಳಾಗಿ ಇರುವುದು ನಿಜವಾದರೆ ನನ್ನ ಅತ್ತೆ ಮಾವಂದಿರು ಬದುಕಿ ಸುಖವಾಗಿರಲಿ' ಎಂದು ನುಡಿದಳು. ತಂದೆ ತಾಯಿಗಳನ್ನು ನೋಡಬೇಕೆಂಬ ಆತುರ ಸತ್ಯವಾನನಿಗೆ ಬಲವಾಗಿತ್ತು. 'ಅವರಿಗೆ ಏನಾದರೂ ಕೇಡು ಒದಗಿದರೆ ನಾನು ಬದುಕಲಾರೆ. ನಾನು ಬದುಕಿರಬೇಕೆಂದು ನಿನಗೆ ಇಚ್ಛೆ ಇರುವುದಾದರೆ ಬೇಗ ಮಾಡು. ಅದರಿಂದ ನನಗೆ ಪ್ರಿಯವಾಗುವುದು' ಎನ್ನುತ್ತಲೆ ಸಾವಿತ್ರಿ ಬೇಗ ಎದ್ದು ತನ್ನ ತಲೆಗೂದಲನ್ನು ಸರಿಮಾಡಿಕೊಂಡಳು. ಕೈಗಳನ್ನು ಹಿಡಿದೆತ್ತಿ ಗಂಡನನ್ನು ನಿಲ್ಲಿಸಿಕೊಂಡಳು. ಆತನ ಮೈ ಸವರಿ ದೂಳು ಕೊಡವಿ ನಾಲ್ಕೂ ಕಡೆ ನೋಡಿದಳು. ಎದುರಿಗೆ ಹಣ್ಣಿನ ಪಾತ್ರೆ ಕಾಣಿಸಿತು. ನಾಳೆ ಬಂದು ಈ ಪಾತ್ರೆಯನ್ನು ತೆಗೆದುಕೊಂಡು ಹೋದರಾಯಿತು, ಯೋಗಕ್ಷೇಮಾರ್ಥವಾಗಿ ನಿಮ್ಮ ಈ ಕೊಡಲಿಯನ್ನು ನಾನು ತರುತ್ತೇನೆ ಎಂದವಳು ಒಂದು ಮರದ ಕೊಂಬೆಗೆ ಹಣ್ಣಿನ ಪಾತ್ರೆಯನ್ನು ತೂಗಹಾಕಿದಳು. ಗಂಡನ ಕೊಡಲಿಯನ್ನು ಕೈಗೆ ತೆಗೆದು ಕೊಂಡಳು. ತನ್ನ ಎಡಭುಜದ ಮೇಲಕ್ಕೆ ಗಂಡನ ಎಡತೋಳನ್ನು ಎಳೆದಿರಿಸಿಕೊಂಡು ಬಲ ತೋಳಿಂದ ಆತನನ್ನು ಆಲಿಂಗಿಸಿಕೊಂಡು ತನ್ನ ದೇಹವನ್ನು ಆತನಿಗೆ ಊರೆಯಾಗಿ ಮಾಡಿ ಮೆಲ್ಲಗೆ ಮೆಲ್ಲಗೆ ಅವನನ್ನು ನಡಸಿಕೊಂಡು ಹೋದಳು.

ಈ ಅರಣ್ಯಗಳಲ್ಲಿ ತಿರುಗಿ ಸತ್ಯವಾನನಿಗೆ ದಾರಿಗಳ ಪರಿಚಯ ಚೆನ್ನಾಗಿತ್ತು. ಜೊತೆಗೆ ತಿಂಗಳು ಹೊಳೆದು ಗಿಡಗಳ ಸಂದಿನಿಂದ ಬೆಳಕು ಹಾಯುತ್ತಿತ್ತು. ಬಂದ ದಾರಿಯನ್ನು ಸಾವಿತ್ರಿಯೂ ಗುರುತಿಸಿದಳು. 'ಬೇರೆ ಯೋಚನೆ ಬೇಡ, ಈ ದಾರಿಯಲ್ಲಿ ನಡೆ. ಹೀಗೇ ನಾವು ಬಂದು ಹಣ್ಣು ಕುಯಿದದ್ದು. ಈ ಮುತ್ತುಗದ ತೋಪಿನಿಂದ ಆಚೆಗೆ ದಾರಿ ಎರಡು ಕವಲೊಡೆಯುತ್ತದೆ. ಉತ್ತರದ ದಾರಿಯನ್ನು ಹಿಡಿದು ಬೇಗ ನಡೆ. ನಾನು ಸ್ವಸ್ಥನಾಗಿದ್ದೇನೆ. ಮೈಯಲ್ಲಿ ಬಲ ಉಂಟಾಗಿದೆ. ಬೇಗ ಹೋಗಿ ತಾಯಿತಂದೆಯರನ್ನು ನೋಡೋಣ' ಎಂದು ಹೇಳಿ ಆಕೆಯೊಡನೆ ಆಶ್ರಮದ ಕಡೆ ಬೇಗ ಬೇಗ ನಡೆದನು.

ಎಷ್ಟು ಹೊತ್ತಾದರೂ ಮಗನೂ ಸೊಸೆಯೂ ಬಾರದಿರುವುದನ್ನು ಕಂಡು ವೃದ್ಧರಿಗೆ ನಿಜವಾಗಿ ಬಹು ಕಳವಳವಾಗಿತ್ತು. ಈ ಹೊತ್ತಿಗಾಗಲೇ ದ್ಯುಮತ್ಸೇನನಿಗೆ ಕಣ್ಣು ಬಂದು ಪ್ರಸನ್ನಾತ್ಮನಾಗಿದ್ದನು. ಎಲ್ಲವನ್ನೂ ಸ್ವಂತ ವಾಗಿ ನೋಡಬಲ್ಲವನಾಗಿದ್ದನು. ಆತನು ಹೆಂಡತಿ ಶೈಬಿಯೊಡನೆ ಪ್ರತಿ ಯೊಂದು ಆಶ್ರಮಕ್ಕೂ ಹೋಗಿ 'ನೀವು ಕಂಡಿರಾ, ಮಕ್ಕಳು ನಿಮ್ಮಲ್ಲಿಗೆ ಬಂದಿದ್ದರೆ, ಅವರ ಸಂಗತಿ ನಿಮಗೇನಾದರೂ ತಿಳಿದಿದೆಯೆ'? ಎಂದು ಕೇಳಿ ಕೊಂಡು ತಿರುಗಾಡಿದ್ದನು. ಯಾವ ಶಬ್ದವನ್ನು ಕೇಳಿದರೂ ಆ ಕಡೆ ಮುಖ ವನ್ನು ಚಾಚಿ ನೋಡುತ್ತ ಮಗನೂ ಸೊಸೆಯೂ ಬಂದರೆಂದೇ ರಾಜನು ಭ್ರಾಂತಿಗೊಳ್ಳುತ್ತಿದ್ದನು. ದಾರಿಯ ದರ್ಭೆ, ಮುಳ್ಳು, ಕಲ್ಲು, ತಗುಲಿ ಗಾಯವಾಗಿ ಆತನ ಕಾಲಲ್ಲಿ ರಕ್ತ ಸೋರುತ್ತಿತ್ತು. ಸುತ್ತ ಮುತ್ತ ಇದ್ದ ತಾಪಸರು ಅವರಿಗೆ ಸಮಾಧಾನ ಹೇಳಿದರು. ಅವರ ಆಶ್ರಮಕ್ಕೆ ಅವರನ್ನು ಕರೆದುಕೊಂಡು ಹೋಗಿ ಸುತ್ತಲೂ ಕುಳಿತರು. ಅಭಯ ನುಡಿದರು. ಕೆಲವರು ಹಿಂದಿನ ರಾಜರ ಕಥೆಗಳನ್ನು ಹೇಳಿ ಮನಸ್ಸಿಗೆ ನೆಮ್ಮದಿ ತರುವ ಮಾತುಗಳನ್ನು ಆಡಿದರು. ಎಷ್ಟು ಆಶ್ವಾಸ ಕೊಟ್ಟರೂ ಆ ಮುದುಕರಿಗೆ ಶಾಂತಿ ಬಾರದು. ಮಗನ ಬಾಲ್ಯದ ವೃತ್ತಾಂತಗಳನ್ನೆಲ್ಲ ಪುನಃ ಪುನ್ನ ನೆನೆಯುವರು. ಅವನು ಕಳೆದೇ ಹೋಗಿರಬೇಕೆಂಬಂತೆ ಆಡಿದುದನ್ನೇ ಆಡುತ್ತ, ದೀನನಾಗಿ ಮಾತನಾಡುತ್ತ ರಾಜನು, 'ಹಾ! ಪುತ್ರ, ಹಾ ಸಾಧ್ವೀಃ ವಧೂ, ನೀವೆಲ್ಲಿದ್ದೀರಿ, ಎಲ್ಲಿದ್ದೀರಿ' ಎಂದು ರೋದಿಸುತ್ತಿದ್ದನು. ಸುವರ್ಚಸ ಗೌತಮ, ಭರಧ್ವಾಜ, ದಾಲ್ಭ್ಯ, ಮಾಂಡವ್ಯ, ಧೌಮ್ಯ ಮುಂತಾದ, ಋಷಿಗಳೂ ಬೇರೆ ಋಷಿ ಶಿಷ್ಯರೂ ಇತರ ಬ್ರಾಹ್ಮಣರೂ ಒಬ್ಬೊಬ್ಬರು ಒಂದೊಂದು ರೀತಿ ಅವರಿಗೆ ನಂಬಿಕೆ ಹೇಳಿದರು; ಧೈರ್ಯ ಕೊಟ್ಟರು; ಚಿಂತೆ ಬೇಡವೆಂದರು. ಪತಿವ್ರತೆಯಾಗಿ ಸತ್ಯಸಂಧಳಾಗಿ ವ್ರತನಿಷ್ಠಳಾಗಿ ಮೂರು ರಾತ್ರಿಯ ಕಠಿಣ ನಿಯಮವನ್ನು ಪಾಲಿಸಿ ಇನ್ನೂ ನಿರಾಹಾರಳಾಗಿರುವ ಸಾವಿತ್ರಿಯಂತಹ ಮಡದಿ ಜೊತೆಯಲ್ಲಿರುವಾಗ ಸತ್ಯವಾನನಿಗೆ ಯಾವ ಕೇಡೂ ಅಡಸಲಾರದು ಎಂದರು. ನಿಮ್ಮ ಮಗನ ತೇಜಸ್ಸು ಅಲ್ಪಾಯು ವಿನ ತೇಜಸ್ಸಲ್ಲ; ಖಂಡಿತವಾಗಿ ಬೇಗ ಬರುವನು. ಅವನ ಹೆಂಡತಿಯ

ಸೌಮಂಗಲ್ಯ ಅಖಂಡವಾದುದು. ಆಕೆಯ ಪುಣ್ಯಪ್ರಭಾವದಿಂದ ಅವನು ಬದುಕಿರುವನು. ಇದ್ದಕ್ಕಿದ್ದಂತೆ ನಿಮಗೆ ಕಣ್ಣು ಬಂದಿದೆ. ಇದರಿಂದಾದರೂ ನಿಮ್ಮ ಅದೃಷ್ಟ ಮೇಲಾಗುವುದೆಂದು ನೀವರಿಯಬೇಕು. ಮಗನೂ ಸೊಸೆಯೂ ಬೇಗ ಬಂದು ನಿಮ್ಮನ್ನು ಕಾಣುವರು. ಸತ್ಯವಂತನು ಜೀವಂತನಾಗಿದ್ದಾನೆ, ಜೀವಂತನಾಗಿದ್ದಾನೆ ಎಂಬ ಸ್ವಸ್ತಿ ವಾಚನವನ್ನು ಅವರು ನುಡಿಯುತ್ತಿರುವ ಹಾಗೆಯೇ ಸಾವಿತ್ರಿ ಸತ್ಯವಾನರು ಆಶ್ರಮದೊಳಕ್ಕೆ ಬಂದು ಆ ಮಹಾರಾತ್ರಿಯಲ್ಲಿ ಎಲ್ಲರನ್ನೂ ಸಂತೋಷಗೊಳಿಸಿದರು.

ನೆರೆದಿದ್ದವರೆಲ್ಲ ಮಹಾರಾಜನಿಗೆ ಅಭ್ಯುದಯ ಬೆಳೆದುದನ್ನು ಕಂಡು ಆನಂದಪಟ್ಟರು. ಇನ್ನೂ ಹೆಚ್ಚಿನ ಸಂತೋಷ ನಿಮಗೆ ಕಾದಿದೆ ಎಂದು ಶುಭವನ್ನು ನುಡಿದರು. ಮೊದಲ ಸಂಭ್ರಮ ಕಳೆದು, ಉಂಟಾಗಿದ್ದ ಶೋಕ ಅಡಗಿದ ಮೇಲೆ ಉರಿಯುತ್ತಿರುವ ಬೆಂಕಿಯ ಮುಂದೆ ಸ್ವಸ್ಥಮಾನಸರಾಗಿ ಎಲ್ಲರೂ ಕುಳಿತಿರುವಾಗ, ಅಲ್ಲಿದ್ದ ವನವಾಸಿಗಳು "ರಾತ್ರಿ ಇಷ್ಟು ಹೊತ್ತಾದ ಮೇಲೆ, ಇಷ್ಟು ತಡವಾಗಿ ನೀವು ಬಂದುದಕ್ಕೆ ಕಾರಣವೇನು ? ದಾರಿಯಲ್ಲಿ ವನದಲ್ಲಿ ತೊಂದರೆಗಳೇನಾದರೂ ಆದುವೆ ? ನಿಮ್ಮ ತಾಯಿತಂದೆಗಳಿಗೂ ನಮಗೂ ಕಾತರ ಉಂಟಾಗಿತ್ತು. ಈ ವಿಲಂಬ ಅಕಸ್ಮಾತ್ ಆಗಿರಲಾರದು. ಏನೋ ಕಾರಣವಿರಬೇಕು. ಅದನ್ನು ಕೇಳಲು ಕುತೂಹಲವುಳ್ಳವರಾಗಿದ್ದೇವೆ, ಹೇಳಬೇಕು" ಎಂದು ರಾಜಪುತ್ರನನ್ನು ಕೇಳಿದರು. ತನಗೆ ತಿಳಿದ ಮಟ್ಟಿಗೆ ನಡೆದುದನ್ನು ನಡೆದಂತೆ ಸತ್ಯವಾನನು ಅವರಿಗೆ ವಿವರಿಸಿದನು. ತಾನು ನಿದ್ರೆ ಹೋದ ಮೇಲೆ ನಡೆದ ಸಂಗತಿಗಳು ಸಾವಿತ್ರಿ ಒಬ್ಬಳಿಗೆ ಮಾತ್ರ ಗೊತ್ತೆಂದು ಹೇಳಿದನು. ಗೌತಮ ಋಷಿ 'ನಿಮ್ಮ ತಂದೆಗೆ ಇದ್ದಕ್ಕಿದ್ದಂತೆ ಕಣ್ಣು ಬಂದಿದೆ. ನಿನಗೆ ಯಾವ ಸಂಗತಿಗಳೂ ತಿಳಿದಿಲ್ಲ. ಸಾವಿತ್ರೀ ದೇವಿಯಂತೆ ತೇಜಸ್ಸುಳ್ಳ ಈ ನಿನ್ನ ಭಾರ್ಯೆ ಸಾವಿತ್ರಿಯೇ ನಮಗೆ ಎಲ್ಲವನ್ನೂ ತಿಳಿಸಬೇಕು. ಇದರಲ್ಲಿ ಯಾವ ರಹಸ್ಯವೂ ಇಲ್ಲದ ಪಕ್ಷದಲ್ಲಿ ಸೂಕ್ಷ್ಮವಾಗಿ ತಿಳಿಸಲಿ' ಎಂದರು. 'ನೀವು ತಿಳಿದಿರುವುದು ಸರಿ, ನಿಮ್ಮ ಸಂಕಲ್ಪ ಎಂದಿಗೂ ಅನ್ಯಥಾ ಆಗಲಾರದು, ಇಲ್ಲಿ ಯಾವ ರಹಸ್ಯವೂ

ಇಲ್ಲ. ನಿಜವಾಗಿ ನಡೆದುದನ್ನು ಹೇಳುತ್ತೇನೆ, ಕೇಳಬೇಕು' ಎಂದು ನಡೆದ ಕಥೆಯನ್ನು ಹಿರಿಯರಿಗೂ ಋಷಿಗಳಿಗೂ ಆಕೆ ವರ್ಣಿಸಿದಳು.

೪

'ಮಹಾತ್ಮರಾದ ನಾರದರು ನನ್ನ ಪತಿಯ ಮರಣದ ಕಾಲವನ್ನು ಕುರಿತು ನನಗೆ ಹಿಂದೆಯೇ ತಿಳಿಸಿದ್ದರು. ಇಂದೇ ಆ ದಿವಸ. ಆದ್ದರಿಂದಲೇ ನಾನು ಇವರನ್ನು ಒಂಟಿಯಾಗಿ ಬಿಡದೆ ಇವರ ಜೊತೆಯಲ್ಲಿ ಕಾಡಿಗೆ ಹೋದದ್ದು. ತಲೆಶೂಲೆಯಿಂದ ಮಲಗಿ ಇವರಿಗೆ ನಿದ್ರೆ ಬಂದಾಗ ಕಿಂಕರರೊಡನೆ ಸಾಕ್ಷಾತ್ ಯಮನು ಬಂದನು. ಇವರ ಜೀವವನ್ನು ಕಟ್ಟಿ ಪಿತೃಗಳು ವಾಸಿಸುವ ದಕ್ಷಿಣ ದಿಕ್ಕಿನಲ್ಲಿ ಹೊರಟನು. ಆತನ ಹಿಂದೆಯೇ ಹೋಗಿ ಸತ್ಯವಾದ ಮಾತುಗಳಿಂದ ಆತನನ್ನು ನಾನು ಸ್ತೋತ್ರ ಮಾಡಿದೆನು. ಆ ವಿಭು ಸಂತುಷ್ಟನಾಗಿ ನನಗೆ ಐದು ವರಗಳನ್ನು ಕೊಟ್ಟನು. ಮಾವಂದಿರಿಗೆ ಕಣ್ಣುಗಳು ಮತ್ತು ಸ್ವರಾಜ್ಯ ಬರುವಂತೆ ಎರಡು; ನನ್ನ ತಂದೆಗೂ ನನಗೂ ನೂರು ನೂರು ಮಂದಿ ಗಂಡು ಮಕ್ಕಳಾಗುವಂತೆ ಇನ್ನೆರಡು; ನನ್ನ ಪತಿಯಾದ ಸತ್ಯವಾನನಿಗೆ ನಾಲ್ಕು ನೂರು ವರುಷದ ಆಯುಸ್ಸು ಲಭಿಸುವುದು ಐದನೆಯದು. ನನ್ನ ಪತಿ ಬದುಕಲೆಂದೇ ನಾನು ಮೂರು ದಿನಗಳ ವ್ರತವನ್ನು ಹಿಡಿದುದು. ತಮಗೆ ಈ ಕಥೆಯನ್ನು ಸತ್ಯವಾಗಿ ಹೇಳಿದ್ದೇನೆ. ನಾವು ಆಶ್ರಮಕ್ಕೆ ಹಿಂದಿರುಗುವುದಕ್ಕೆ ತಡವಾಗಲೂ ಇದೇ ಕಾರಣ. ಮಹತ್ತಾದ ದುಃಖವುಂಟಾಗಿ ಆ ಮೇಲೆ ಸುಖವುಂಟಾದ ವೃತ್ತಾಂತವನ್ನು ನಿಮಗೆ ವಿವರವಾಗಿ ತಿಳಿಸಿದ್ದೇನೆ' ಎಂದಳು.

ಋಷಿಗಳಿಗೆ, ಹಿರಿಯರಿಗೆ ಇದನ್ನು ಕೇಳಿ ಪರಮಾನಂದವಾಗಿರಬೇಕು. 'ವ್ಯಸನಗಳ ಭಾರದಲ್ಲಿ ತಮೋಮಯವಾದ ಮಡುವಿನಲ್ಲಿ ಮುಳುಗಿ ಹೋಗಿದ್ದ ಈ ಮಹಾರಾಜನ ಕುಲ ಕುಲೀನಳಾದ ನಿನ್ನಂಥ ಸಾಧ್ವಿಯಿಂದ ಉದ್ಧಾರವಾಯಿತು' – ಎಂದು ಸುಶೀಲೆಯಾದ ಆಕೆಯ ಪುಣ್ಯದ ಫಲವನ್ನು ಪ್ರಶಂಸೆ ಮಾಡುತ್ತ ಋಷಿಗಳು ರಾಜನನ್ನು ಬೀಳ್ಕೊಂಡು ಸಂತುಷ್ಟಚಿತ್ತರಾಗಿ ತಮ್ಮ ತಮ್ಮ ಮನೆಗಳಿಗೆ ಹೋದರು.

ರಾತ್ರಿ ಕಳೆಯಿತು. ಮರುದಿನ ಸೂರ್ಯೋದಯವಾಯಿತು. ಪ್ರಾತಃ ಕಾಲದ ನಿತ್ಯಕರ್ಮಗಳನ್ನು ಮಾಡಿಕೊಂಡು ತಪೋಧನರೆಲ್ಲ ಪುನಃ ಇವರ ಆಶ್ರಮಕ್ಕೆ ಬಂದರು. ಸಾವಿತ್ರಿಯ ಮಹಾಭಾಗ್ಯವನ್ನು ಎಷ್ಟು ಹೊಗಳಿ ಸಂತೋಷಪಟ್ಟರೂ ಅವರಿಗೆ ತೃಪ್ತಿಯಿಲ್ಲ. ಅಷ್ಟು ಹೊತ್ತಿಗೆ ದ್ಯುಮತ್ಸೇನ ಮಹಾರಾಜನಲ್ಲಿಗೆ ಶಾಲ್ವ ರಾಷ್ಟ್ರದಿಂದ ಮಂತ್ರಿಪ್ರಧಾನರು ಒಟ್ಟುಗೂಡಿ ಬಂದರು. ಮಂತ್ರಿ, ರಾಜನ ಶತ್ರುಗಳನ್ನೆಲ್ಲ ನಾಶಮಾಡಿದನೆಂಬ ಸಂಗತಿ ಗೊತ್ತಾಯಿತು. ಹಗೆಯ ಬಂಧುಬಾಂಧವರೂ ಸಹಾಯವರ್ಗವೂ ಮುರಿದು ಬಿದ್ದುದನ್ನು ತಮ್ಮ ರಾಜನಿಗೆ ನಿವೇದಿಸಿದರು. ದ್ಯುಮತ್ಸೇನನು ಸಚಕ್ಷುವಾಗಲಿ ಅಚಕ್ಷುವಾಗಲಿ ಆತನೇ ನಮ್ಮ ರಾಜನು ಎಂದು ರಾಜ್ಯದ ಜನರೆಲ್ಲರೂ ಏಕಮತದಿಂದ ನಿಶ್ಚಯಿಸಿದ್ದಾರೆ, ನಗರಕ್ಕೆ ಹಿಂದಿರುಗಬೇಕು ಎಂಬ ಪ್ರಾರ್ಥನೆ ಯನ್ನು ರಾಜನಲ್ಲಿ ಪ್ರಸ್ತಾಪಿಸಿದರು. ರಾಜನನ್ನು ಕರೆದುಕೊಂಡು ಹೋಗ ಬೇಕೆಂದೇ ತಾವು ಬಂದಿರುವುದು, ಯಾನವಾಹನಗಳೂ ಚತುರಂಗ ಬಲವೂ ಬಂದಿವೆ, ಇವುಗಳೊಡನೆ ಪಟ್ಟಣಕ್ಕೆ ದಯಮಾಡಿಸಿ ಪಿತೃಪೈತಾಮಹವಾದ ರಾಜಪದವಿಯನ್ನು ಬಹುಕಾಲ ಅನುಭವಿಸಿ. ನಗರವೆಲ್ಲ ನಿಮ್ಮ ಜಯ ಸಂಭ್ರಮದಲ್ಲಿದೆ ' ಎಂದು ಹೇಳುತ್ತಿರಲು ರಾಜನಿಗೆ ಕಣ್ಣು ಕಾಣುತ್ತಿರುವುದು ಅವರಿಗೆ ಕಂಡಿತು. ಅದನ್ನು ನೋಡಿ ವಿಸ್ಮಯಗೊಂಡು ಆತನ ಕಡೆ ನೋಡುತ್ತ ಎಲ್ಲರೂ ಆತನ ಕಾಲಿಗೆ ಬಿದ್ದು ನಮಸ್ಕಾರ ಮಾಡಿದರು. ಮಹಾರಾಜನು ಅಲ್ಲಿದ್ದ ಆಶ್ರಮವಾಸಿಗಳಾದ ದ್ವಿಜರಿಗೆ ಅಭಿವಾದನೆ ಮಾಡಿ ಅವರು ಮಾಡಿದ ಮರ್ಯಾದೆಗಳನ್ನು ಸ್ವೀಕರಿಸಿ ತನ್ನ ನಗರದಕಡೆ ಪ್ರಯಾಣ ಮಾಡಿದನು. ರಾಣಿ ಶೈಬಿಯೂ ಸೊಸೆ ಸಾವಿತ್ರಿಯೂ ಪಲ್ಲಕ್ಕಿಯಲ್ಲಿ ಕುಳಿತು ಹೊರಟರು. ಅವರ ಸುತ್ತಲೂ ರಕ್ಷಣೆಗಾಗಿ ಸೇನೆ ಹೊರಟಿತು.

ರಾಜಧಾನಿಯನ್ನು ಸೇರಿದ ಮೇಲೆ ಪುರೋಹಿತರು ಪ್ರೀತಿಯಿಂದ ದ್ಯುಮತ್ಸೇನನಿಗೆ ರಾಜ್ಯಾಭಿಷೇಕವನ್ನು ಮಾಡಿದರು. ಸತ್ಯವಾನನು ಯುವ ರಾಜನಾದನು. ಸಾವಿತ್ರಿಯ ಕೀರ್ತಿ ಲೋಕಕ್ಕೆಲ್ಲ ತಿಳಿದು ಪ್ರಖ್ಯಾತ ವಾಯಿತು. ಆಕೆಯ ಹೊಟ್ಟೆಯಲ್ಲಿ ಕಾಲಕ್ರಮದಲ್ಲಿ ನೂರು ಮಂದಿ ಗಂಡು ಮಕ್ಕಳು ಹುಟ್ಟಿದರು. ಮಾಳವಿಯಲ್ಲಿ ಅಶ್ವಪತಿಗೆ ಮಹಾಬಲರಾದ ನೂರು

ಮಂದಿ ಮಕ್ಕಳು ಹುಟ್ಟಿ ಸಾವಿತ್ರಿಗೆ ಸಹೋದರರಾದರು. ಹೀಗೆ ಸಾವಿತ್ರಿ ತನ್ನ ತಂದೆತಾಯಿಯರು, ಅತ್ತೆಮಾವಂದಿರು, ತನ್ನ ಗಂಡ, ಕುಲ ಎಲ್ಲವನ್ನೂ ಆಪತ್ತುಗಳಿಂದ ರಕ್ಷಿಸಿ ತನ್ನ ತಪಸ್ಸಿನಿಂದ ಉದ್ಧಾರ ಮಾಡಿದಳು.

ಇಂತಹ ಸಾವಿತ್ರಿಯ ಕಥೆಯನ್ನು ಯುಧಿಷ್ಠಿರನಿಗೆ ಮಾರ್ಕಂಡೇಯ ಋಷಿ ವಿವರಿಸಿ ಶೀಲಸಂಪನ್ನಳಾದ ಸಾವಿತ್ರಿಯಂತೆಯೇ ಕಲ್ಯಾಣಿಯಾದ ದ್ರೌಪದಿ ನಿಮಗೆ ಸಂಭವಿಸಿರುವ ಆಪತ್ತುಗಳಿಂದ ನಿಮ್ಮನ್ನು ದಾಟಿಸುತ್ತಾಳೆ ಎಂದು ಭರವಸೆ ಕೊಟ್ಟನು.

೫

ಮಹಾಭಾರತದ ಕಾಲಕ್ಕೆ ಬಹು ಮುಂಚೆ ನಡೆದ ಇಂಥ ಕಥೆಗಳು ಹಲವಾರು, ಉಪಾಖ್ಯಾನಗಳಾಗಿ ಮಹಾಭಾರತ ಗ್ರಂಥದಲ್ಲಿ ಪರ್ವಗಳ ಕಥಾ ಸಂದರ್ಭಕ್ಕೆ ತಕ್ಕಂತೆ ಬರುತ್ತವೆ. ಆದಿಪರ್ವ ಅರಣ್ಯ ಪರ್ವಗಳಲ್ಲಿ ಇಂಥವುಗಳ ಸಂಖ್ಯೆ ಹೆಚ್ಚು. ಭಾರತ ಸಂಸ್ಕೃತಿಯ ಮೇಲ್ಪಂಕ್ತಿಗಳಾದ ಅಂದಿನ ವೀರರಾದ ಗಂಡಸರೂ ಹೆಂಗಸರೂ ಬಹು ಕಾಲದಿಂದ ನಮ್ಮ ಜನರ ಭಕ್ತಿಗೂ ಮೆಚ್ಚಿಕೆಗೂ ಪಾತ್ರರಾಗಿದ್ದಾರೆ. ಸಾವಿತ್ರಿಯಂಥ ಮಹಿಳೆಯ ಕೀರ್ತಿ ನಾಡಿನಲ್ಲಿ ಸುಮಾರು ಎಲ್ಲರಿಗೂ ತಿಳಿದದ್ದೇ. ಇವಳನ್ನು ಕುರಿತು ಹಲವಾರು ಗ್ರಂಥಗಳು ಈ ಎರಡು ಸಾವಿರ ವರ್ಷಗಳಲ್ಲಿ ಬೇರೆ ಬೇರೆ ಭಾಷೆಗಳಲ್ಲಿ ಹುಟ್ಟಿ ಸ್ವಂತ ಗುಣದಿಂದ ಸಾಹಿತ್ಯವಾಗಿ ಧರ್ಮದರ್ಶನವಾಗಿ ಹೆಸರು ಸಂಪಾದಿಸಿಕೊಂಡಿವೆ. ಆ ಎಲ್ಲ ಕಥೆಗಳಿಗೂ ಮೂಲ, ಮಹಾಭಾರತದಲ್ಲಿರುವ ಈ ಕಥೆ. ಇಲ್ಲಿರುವಂತೆ ಕಥೆಯನ್ನು ಓದಿದರೆ ಅದರ ವಿಶೇಷ ವೇನೆಂಬುದು ಮಂದಟ್ಟಾಗುವುದು ಜನದ ಸಂಸರ್ಗ ಉಂಟಾಗದ ಮುಂಚೆ ನದಿಯ ನೀರು ಎಷ್ಟು ತಿಳಿಯಾಗಿರುತ್ತದೆಯೋ ಅಷ್ಟು ಸ್ವಚ್ಛವಾಗಿದೆ ಈ ಕಥೆ.

ಆಗಿನ ಜೀವನ ರೀತಿಗೂ ಇಂದಿನದಕ್ಕೂ ತುಂಬಾ ಅಂತರವಿದೆ. ವೇಷ ಭೂಷ, ಮನಸ್ಸು ಮಾತು, ದೃಷ್ಟಿ ಬೇರೆಯುವು. ಆ ತಪೋವನಗಳೂ

ಋಷಿಗಳು ಇಂದಿನ ಪ್ರಪಂಚದಲ್ಲಿಲ್ಲ. ಜೀವನವನ್ನು ನಡಸುವ, ಕಷ್ಟಕ್ಕೆ ಸಿಕ್ಕಿಸುವ, ಅವುಗಳಿಂದ ಮೇಲಕ್ಕೆ ಎತ್ತಿ ಬದುಕಿಸುವ ಇಂದಿನ ರೀತಿ ನೀತಿಗಳಿಗೂ ಅಂದಿನವಕ್ಕೂ ಹೊಂದಿಕೆಯಾಗದಷ್ಟು ದೂರ ಕಾಣುವುದು. ಅವರ ನಂಬಿಕೆಗಳೂ ಧರ್ಮ ಶ್ರದ್ಧೆಗಳೂ ನಮ್ಮವಲ್ಲ. ಆ ರೀತಿ ಪುಣ್ಯ, ಧರ್ಮ, ಕರ್ಮ, ಸ್ವರ್ಗ, ನರಕ ಇವುಗಳಲ್ಲಿ ಇಂದು ವಿಶ್ವಾಸವಿಲ್ಲ. ಹೀಗಿರುವಾಗ ಯಮದರ್ಶನ, ಆತನು ಪಾಶಕ್ಕೆ ಬಿಗಿದುಕೊಂಡು ಜೀವ ವನ್ನು ತೆಗೆದುಕೊಂಡು ಹೋಗುವನೆಂಬುದು, ಆತನೊಡನೆ ಮಾತು ಕತೆ, ಆತನನ್ನು ಹಿಂಬಾಲಿಸುವುದು – ಎಂಬ ಮಾತುಗಳಿಗೆ ಅರ್ಥ ಕಲ್ಪಿಸುವುದು ಇಂದು ಕಷ್ಟ. ಹಿಂದಿನ ಕಥೆಗಳಲ್ಲಿ ಬರುವ ವರ ಶಾಪಗಳಲ್ಲಿಯೂ ನಮಗೆ ನಂಬಿಕೆ ಬಾರದು. ಹೀಗಾಗಿ ಈ ಕಾಲಕ್ಕೆ ಇಲ್ಲಿನ ಹಲವು ಅಂಶಗಳು ಅಸ್ವಾಭಾವಿಕವಾಗಿ ಕಂಡರೆ ಆಶ್ಚರ್ಯವೇನು? ಆದರೂ ಈ ಕಥೆಗಳಲ್ಲಿನ ಸತ್ಯದರ್ಶನ ಧರ್ಮದರ್ಶನ ಎಲ್ಲ ಕಾಲದವರಿಗೂ ಎಲ್ಲ ದೇಶದವರಿಗೂ ಸ್ಫೂರ್ತಿಯನ್ನೂ ಭಕ್ತಿಯನ್ನೂ ತಂದಿರುವುದು ನಿಜ. ಮನುಷ್ಯನ ಮನಸ್ಸಿನಲ್ಲಿ ಅಡಗಿ ಅವನನ್ನು ಶುಚಿಗೂ ಧೈರ್ಯಕ್ಕೂ ಸಜ್ಜನತೆಗೂ ನಡಸುವ ಪ್ರವೃತ್ತಿಗಳು ಎಲ್ಲಿವೆಯೋ ಅಲ್ಲೆಲ್ಲ ಇಂಥ ಕಥೆಗಳಿಂದ ಎಚ್ಚರಗೊಂಡು ಅವು ಬಲವಾಗುವುವು. ಅವುಗಳ ಅಡಿಯಲ್ಲಿರುವ ಸಾರ್ವಕಾಲಿಕವಾದ ಮಾನವತೆ ನಮ್ಮನ್ನು ಮುಗ್ಧರನ್ನಾಗಿ ಮಾಡುವುದು. ಈ ಮಹನೀಯರಲ್ಲಿ ಆತ್ಮೀಯತೆ ತಂದುಕೊಡುವುದು. ಸಾವಿತ್ರಿ ಯಮನನ್ನು ಕಂಡಳೋ ಬಿಟ್ಟಳೋ; ಅವನನ್ನು ಅನುಸರಿಸಿದಳೋ ಇಲ್ಲವೋ; ಅವಳ ಜ್ಞಾನಕ್ಕೂ ಕುಲೀನತೆಗೂ ಮೆಚ್ಚಿ ಯಮನು ವರ ಕೊಟ್ಟನೋ ಇಲ್ಲವೋ – ಅದನ್ನು ಒಪ್ಪುವವರು ಒಪ್ಪಬಹುದು, ಬಿಡುವವರು ಬಿಡಬಹುದು. ಯಮನೆನ್ನುವವನು ಒಬ್ಬ ವ್ಯಕ್ತಿಯೆ? ಜೀವವೆಂಬುದು ದೇಹದಿಂದ ಇನ್ನೊಬ್ಬರು ಸೆಳೆದು ಪಾಶದಲ್ಲಿ ಕಟ್ಟಿಕೊಂಡು ಹೋಗಬಲ್ಲಂಥ ವಸ್ತುವೆ? ಯಮಲೋಕ ದಕ್ಷಿಣದಲ್ಲಿ ನೆಲಸಿದೆಯೆ? ಅದಕ್ಕೂ ಭೂಮಿಗೂ ನಡುವೆ ರಸ್ತೆಗಳಿವೆಯೆ? ಆತನು ತನ್ನ ತಮ್ಮನಂತೆ ಮಂದನೆ? ಎಂಬ ಪ್ರಶ್ನೆಗಳು ಯುಕ್ತಿಗೆ ಸಂಬಂಧಿಸಿದವು. ಇದು ಬಹು ಹಿಂದಿನ ಕಾಲದ ಕಥೆ. ಆ ಕಾಲದ ನಂಬಿಕೆ, ನಡತೆ,

ಆವರಣಗಳಿಗೆ ಸಂಬಂಧಿಸಿದುದು. ಎಲ್ಲ ದೇಶಗಳಲ್ಲಿಯೂ ಹೀಗೆಯೇ. ಇಲ್ಲಿ ನಡೆದ ಮತ್ತು ನಡೆಯಿತೆಂದು ವರ್ಣಿಸಿರುವ ಕಥೆಯ ಜೊತೆಗೆ ಯಾವುದೋ ಸತ್ಯದರ್ಶನ, ತತ್ತ್ವಸ್ಥಾಪನ ಈ ರೂಪವಾಗಿ ಆಗಿದೆ. ಮೇಲಾಗಿ ಒಂದು ಅಚ್ಚ ಬದುಕಿನ ಚಿತ್ರ ಸಿಕ್ಕುವುದು – ಒಂದು ಸತ್ಯದ ಸಂಕೇತವಾಗಿ ಉಳಿಯುವುದು.

ಇಷ್ಟು ನಿಜ : ಸಾವಿತ್ರಿಯ ಭಕ್ತಿ ನಿಷ್ಠೆಗಳಿಂದಲೂ ವ್ರತ ಪುಣ್ಯಗಳಿಂದಲೂ ಸಲ್ಲಿಸಿದ ಸೇವೆಯಿಂದಲೂ ಆಕೆ ಕೈಹಿಡಿದ ಸತ್ಯವಾನನು ಬದುಕಿಕೊಂಡನು. ಆಕೆಯ ಪ್ರಯತ್ನದಿಂದ ಆಕೆಯ ತಾಯಿತಂದೆಯರಿಗೂ ಅತ್ತೆ ಮಾವಂದಿರಿಗೂ ಹಿಂದಿಲ್ಲದಿದ್ದ ಸಂತೋಷಗಳೂ ಸಂಪತ್ತೂ ಬಂದುವು. ಶೀಲವಂತಳಾದ ಒಬ್ಬ ಹೆಂಗಸು ತನ್ನ ಚಾರಿತ್ರದಿಂದ ಸುತ್ತಲಿನ ಎಲ್ಲವನ್ನೂ ಸರಿಗೊಳಿಸಬಲ್ಲಳು ; ಬದುಕಿಸಬಲ್ಲಳು ; ಎಲ್ಲರ ಭಾಗ್ಯಕ್ಕೂ ನೆರವಾಗಿ ತನ್ನ ಸೌಭಾಗ್ಯವನ್ನು ಬೆಳಸಿಕೊಳ್ಳಬಲ್ಲಳು ಎಂಬ ತತ್ತ್ವ ಪ್ರಾಚೀನ ರೀತಿಯಲ್ಲಿ ಇಲ್ಲಿ ವರ್ಣಿತವಾಗಿದೆ. ಒಬ್ಬರ ನಿಷ್ಠೆಯಿಂದ ಇನ್ನೊಂದು ಜೀವವನ್ನು ಉಳಿಸಬಹುದು ಎಂಬ ನಿಜ ಇಲ್ಲಿ ಪ್ರತಿಷ್ಠಿತವಾದಂತಿದೆ. ಹೀಗೇ ಸುಮಾರು ಗ್ರೀಕರ ಆಲ್ಕೆಸ್ಟಿಸ್ ಕಥೆ; ನಮ್ಮಲ್ಲಿ ಮಹಾಶ್ವೇತೆಯ ಕಥೆ – ಕೃತಕಾರ್ಯವಾಗುವುವು. ಆ ಜನರ ಮನಸ್ಸು ಮಕ್ಕಳ ಮನಸ್ಸಿನಂತೆ ತಿಳಿ. ಆ ತಂದೆ ತಾಯಿಯರು, ಆ ಋಷಿಗಳು, ಆ ಗಂಡ ಹೆಂಡಿರು – ಅವರ ಮನಸ್ಸು ಎಷ್ಟು ಚೊಕ್ಕ ! ಎಷ್ಟು ಅಕ್ಕರೆ ಅಲ್ಲಿ, ಎಷ್ಟು ಧಾರಾಳ ನುಡಿಯಲ್ಲಿ ! ಆ ಜನರಲ್ಲಿ ಯಾವ ಮುಚ್ಚುಮರೆಯೂ ಇಲ್ಲ. ಎಲ್ಲವೂ ಸತ್ಯದಂತೆ ತೆರೆದಿರುತ್ತದೆ, ತಿಳಿಯಾಗಿರುತ್ತದೆ. ಸತ್ಯವೇ ಅವರ ಪರಮಧರ್ಮ. ಅದಕ್ಕಾಗಿ ಬದುಕಿದರು ; ಅದಕ್ಕಾಗಿ ಸಾಯಲು ಸಿದ್ಧರಾಗಿರುತ್ತಿದ್ದರು. ಅದನ್ನು ನಂಬಿದರೆ ನಾವು ಬದುಕುತ್ತೇವೆ, ಅದು ನಮ್ಮನ್ನು ಕಾಪಾಡುತ್ತದೆ ಎಂಬ ನಂಬಿಕೆ ಅವರನ್ನು ನಡಸಿತು ; ಉಳಿಸಿತು. ಜನರ ಮನಸ್ಸು ಚೆಲುವಾದ ಕನಸುಗಳನ್ನು ಕಾಣುತ್ತಿರುತ್ತದೆ. ವ್ಯಕ್ತಿಯ ಕನಸು ಒಂದು ಆದರ್ಶ ಕಲ್ಪನೆಯಾದರೆ ಈ ಪುರಾಣಗಳಲ್ಲಿ ಜನಜನಾಂಗಗಳ ಕನಸು ರೂಪುಗೊಂಡಿದೆ. ಹೀಗಾಗಲಾರದು ಎನ್ನುವವರಿಗೆ ಕೂಡ ಹೀಗಾಗ

ಬಲ್ಲುದಾದರೆ ಬದುಕು ಎಷ್ಟು ಚೆನ್ನಾದೀತು ಎನ್ನಿಸುವಷ್ಟು ಮುದ್ದಾಗಿರುತ್ತದೆ ಈ ಲೋಕ.

ಎಂದು ಪಟ್ಟಣಗಳನ್ನೂ ವನಗಳನ್ನೂ ಸುತ್ತಿ ಇಂಥವನೇ ನನ್ನ ಹೃದಯ ಮೆಚ್ಚಿದ ಗಂಡ, ಈತನಿಗೇ ನನ್ನ ಒಲವು ತೆತ್ತುದು, ಈತನಿಗಾದುದು ನನಗೆ, ಒಳ್ಳೆಯದಾದರೆ ಒಳಿತು, ಕೆಟ್ಟುದಾದರೆ ಕೆಟ್ಟುದು – ಎಂದು ಸಾವಿತ್ರಿಯ ಮನಸ್ಸು ನಿಶ್ಚಯಗೊಂಡಿತೋ ಅಂದೇ ಆಕೆಯ ಪ್ರೇಮ ಸುಪ್ರತಿಷ್ಠಿತವಾಯಿತು. ಅವನಿದ್ದರೆ, ಅವಳು : ಅವನು ಸತ್ತರೆ ತಾನೂ ಸಾಯುವವಳೇ – ಎಂದಂದೇ ಯಮನ ಭಯ ಅವಳ ಮೇಲೆ ಇಲ್ಲವಾಯಿತು. ಎಂದರೆ, ಯಮನನ್ನು ಗೆದ್ದಿತು. ಯಮನ ಭೀತಿಯಿಲ್ಲದವರಿಗೆ ಇನ್ನಾವ ಭೀತಿ ಇದ್ದೀತು ? ಇಂಥವನನ್ನು ನಾನು ಮೆಚ್ಚಿದ್ದೇನೆ ಎಂದು ತಂದೆಗೆ ತಿಳಿಸಿದ ಮೇಲೆ ತಂದೆಯ ಮಾತಾಗಲಿ ನಾರದರ ಮಾತಾಗಲಿ ಆಕೆಯ ನಿಶ್ಚಯವನ್ನು ಕದಲಿಸಲು ಶಕ್ತವಾಗಲಿಲ್ಲ. ನಾರದರು ಹೇಳಿದ್ದೇನು ? ಅವನು ಅಲ್ಪಾಯು. ಇನ್ನೊಂದು ವರ್ಷಕ್ಕೆ ಮೀರಿ ಅವನಿಗೆ ಆಯುಸ್ಸಿಲ್ಲ ಎಂದು. ಆಕೆಯ ಮನಸ್ಸು ತಿರುಗದಾಯಿತು. ಆಕೆಯ ಪ್ರೇಮಬಂಧ ಸಾವಿಗಂಜದುದು ; ಸಾವನ್ನೂ ಅದರ ಭಯವನ್ನೂ ಮೀರಿದ್ದು. ಇಂಥವನೊಡನೆ ಹೇಗೆ ನಿನಗೆ ವಿವಾಹ ಮಾಡಲಿ ? ಬೇರೆ ಯಾರನ್ನಾದರೂ ವರಿಸು ಮಗಳೆ, ಎಂದು ಆಕೆಯ ಹಿತವನ್ನು ಬಯಸಿ ತಂದೆ ನುಡಿದರೆ ಆಕೆಯ ದೃಢ ಕರಗಲಿಲ್ಲ. ಮನಸ್ಸಿನ ಪ್ರೀತಿ ಎಲ್ಲಿಗೆ ಹರಿಯಿತೋ ಅಲ್ಲಿಗೇ ಅದು ಮೀಸಲು. ಒಂದು ಸಲ ಒಬ್ಬನಿಗೆ ಒಪ್ಪಿಸಿದ ಹೃದಯವನ್ನು ಇನ್ನೊಬ್ಬನಿಗೆ ಅರ್ಪಿಸುವುದಾದರೂ ಹೇಗೆ ? ಶತಾಯು ಗತಾಯು, ವರಿಸಿದವನು ನೂರು ವರುಷದ ತುಂಬು ಬಾಳು ಬಾಳಲಿ, ಕ್ಷೀಣಾಯುವಾಗಲಿ ಅದಲ್ಲ ಮುಖ್ಯ. ತನ್ನ ಬದುಕು, ಪ್ರೇಮ ಆತನವು. ಮಾಡಿಕೊಂಡ ನಿರ್ಣಯವನ್ನು ನಡಸುವುದೇ ತನ್ನ ಧರ್ಮ. ಆಕೆಗೆ ಅದೇ ಜೀವ. ಅವನಿಗಾದುದು ತನಗೆ. ಅವನನ್ನು ಬಿಟ್ಟು ಸಾವಿತ್ರಿಗೆ ಬೇರೆ ಬದುಕಿಲ್ಲ. ತಂದೆತಾಯಿಗಳು ಅದಕ್ಕೆ ಒಪ್ಪಬೇಕು. ಅದೃಷ್ಟವನ್ನು ಗುಣಿಸಿ ಹೇಳುವ ಋಷಿವಾಣಿ ಕೂಡ ಇಂಥ ನಿಶ್ಚಯದ ಎದುರು ಕುರುಡು. ಅದು ನುಡಿಯುವುದು ಬಹುಶಃ ಕರ್ಮಫಲವಾಗಿ

ಬಂದು ಕಾದಿರುವ ಕಾಲದ ಒಂದು ಗಂಡಾಂತರವನ್ನು. ಅದನ್ನು ಹೊಸ ಕರ್ಮದಿಂದ ನಿವಾರಿಸಬಹುದು; ನಿವಾರಬಹುದು. ಅದು ಎಷ್ಟಾದರೂ ಹೊರಗಿಂದ ಬರುವುದು. ಒಳಗಿನ ಶುಚಿ ಶುದ್ಧಿಗಳಿಂದ ಅವನ್ನು ದಾಟಿ ಕೊಳ್ಳುವ ಶಕ್ತಿ ಮನುಷ್ಯನಿಗೆ ಇದೆ ಎಂಬ ತತ್ತ್ವ ಮನುಷ್ಯರ ಮೂಲ ಬಲವಾಗುವುದು. ಧೀರವಾದ ವ್ಯಕ್ತಿಯ ನಿಷ್ಠೆಗೆ ವಿಧಿ ಅಡ್ಡಿ ಆಗಲಾರದು ಎಂಬಂತಹ ಅಮೃತತತ್ತ್ವ ಸತ್ಯವಂತನನ್ನು ಬದುಕಿಸಿಕೊಂಡಿತು.

ಅಥವಾ, ಯಮನನ್ನು ಹಿಂಬಾಲಿಸಿ ಸತ್ಯವಾನನ ಜೀವದೊಡನೆ ತಾನೂ ಹೋಯಿತೆಂದರೆ ಅರ್ಥವೇನು ? ಆಕೆಯೂ ಸತ್ತು ತನ ಪ್ರೇಮದ ಕೀರ್ತಿಯನ್ನು ಉಳಿಸಿಕೊಂಡಳೆಂದು ತಾನೆ ? ಅಥವಾ, ಗುಣವಿಲ್ಲದೆ, ಬೆಲೆಯಿಲ್ಲದೆ ನೂರು ವರುಷ ಭೂಮಿಯ ಮೇಲೆ ಪ್ರಾಣ ಹೊತ್ತಿದ್ದರೆ ಸಾಕೊ ? ಅಂಥ ಬದುಕು ಬದುಕೆ ? ಇಂಥ ಸಾವು ಸಾವೊ ? ಉಳಿದ ರೀತಿ, ವಿಧಾನ, ವಿವರಗಳನ್ನು ಒಪ್ಪುವುದು ಬಿಡುವುದು ಅವರವರ ರುಚಿಗೆ ಸೇರಿದ್ದು. ವ್ರತ ನಿಯಮ, ಉಪಚಾರ, ನಿಷ್ಠೆ, ಹಿರಿಯರ ಸೇವೆ, ಶುಚಿ, ಸೋಲದ ಕುಂದದ ಪ್ರೇಮ ಇವುಗಳಿಗೆ ಲೋಕದಲ್ಲಿ ಬೆಲೆಯಿಲ್ಲ ವಾದರೆ ಇನ್ನಾವುದಕ್ಕೆ ಉಂಟು ? ಇನ್ನು ಅವು ಯಾವುದು ಇದ್ದರೇನು, ಇಲ್ಲದಿದ್ದರೇನು ? ವಿಧಿ ಅದೃಷ್ಟಗಳ ಶಕ್ತಿ ಪ್ರಬಲವೆಂದು ಜನ ಹೇಳುವರು. ಈ ವಿಧಿಯನ್ನು ಗೆದ್ದುದು ಸೋಲಿಸಿದುದು ಸಾವಿತ್ರಿಯಂತಹವಳ ಮನೋ ನಿಶ್ಚಯ. ಆಕೆಯ ಸತ್ವ ಅಂತಹ ಸತ್ತ್ವ. ಅಂಥವರೊಬ್ಬರ ನಡತೆ ಯಿಂದ ಲೋಕ ಬೆಳಗುವುದು. ಮಾನುಷಕ್ಕೆ ಬೆಲೆ ಗೌರವ ಬರುವುವು. ಲೋಕಕ್ಕೆ ಧೈರ್ಯ, ಧರ್ಮೋತ್ಸಾಹ ಉಂಟಾಗುವುವು. ಬಹುಮಟ್ಟಿಗೆ ಈ ತತ್ತ್ವವೇ ಸಾವಿತ್ರಿಯ ಕಥೆಗೆ ಕಾಂತಿಯನ್ನೂ ಕೀರ್ತಿಯನ್ನೂ ಅಮರತ್ವ ವನ್ನೂ ತಂದಿರುವುದು.

ಜೊತೆಗೆ ಎಷ್ಟು ಶುಚಿಯಾದ ತಿಳಿಯಾದ ಸುಂದರವಾದ ಕಥೆ ಸಾವಿತ್ರಿಯದು ! ಅಂಥ ಗಂಡ ಹೆಂಡತಿ, ಅಂಥ ತಾಯಿ ತಂದೆ, ಅಂಥ ಅತ್ತೆ ಮಾವ ಎಲ್ಲ ಮನೆಗೂ ದೊರೆತರೆ ಲೋಕದ ಬದುಕು ಸ್ವರ್ಗ ವಾದೀತು.

ಸಾವಿತ್ರಿಯ ತಂದೆ ಅಶ್ವಪತಿಯ ಉದಾರ ಮನಸ್ಸನ್ನೂ ದ್ಯುಮತ್ಸೇನನ ವಾತ್ಸಲ್ಯವನ್ನೂ ಸತ್ಯವಾನನ ಪಿತೃಭಕ್ತಿಯನ್ನೂ ನೋಡಿದರೆ ಇಷ್ಟು ಪ್ರೀತಿ ಭಕ್ತಿಗಳಿಗೆ ಫಲವಿಲ್ಲವೆ ಎನ್ನಿಸುತ್ತದೆ. ಅಥವಾ ಬೇರೆ ಫಲವೇಕೆ ಬೇಕು ? ಅದಕ್ಕೆ ಅದೇ ಫಲ. ಇಲ್ಲಿ ವರ್ಣಿತರಾಗಿರುವ ಜನ ನಿರ್ಮಲವಾದ ಅಂತಃ ಕರಣವುಳ್ಳವರು ; ಮೃದು ಮನಸ್ಸಿನವರು ; ಕಪಟವಿಲ್ಲದವರು. ಇಂದು ತಾವು ಹೆಚ್ಚು ನಾಗರಿಕರು ಎಂದುಕೊಳ್ಳುವ ಜನ ಅಶ್ವಪತಿಯ ಧಾರಾಳವನ್ನು ಅತಿ ನವೀನವೆಂದು ಮೆಚ್ಚಿ ಹೊಗಳಬಲ್ಲರು. ವಯಸ್ಸಾದ ಮಗಳಿಗೆ ಗಂಡ ನನ್ನು ಹುಡುಕಿಕೊಂಡು ಬರುವ ಸ್ವಾತಂತ್ರ್ಯ ಕೊಡುವವರು ಇಂದು ಕೂಡ ಎಷ್ಟು ಮಂದಿ ಇದ್ದಾರು? ಹಾಗೆ ಮೃತ್ಯುವಿನ ಪಾಶದಿಂದ ತಪ್ಪಿಸಿ ಬದುಕಿಸಿ ಕೊಂಡ ಹೆಂಡತಿಯ ಎದುರಿಗೆ ಮರಣದಿಂಬ ಬಿಡುಗಡೆಯಾದ ಸತ್ಯವಾನನು ಆಶ್ರಮದಲ್ಲಿನ ತಂದೆತಾಯಿಗಳನ್ನು ನೆನೆಯುತ್ತ ಅವರಿಗೇನಾದರೂ ಕೇಡು ಸಂಭವಿಸಿದ್ದರೆ ನಾನು ಬದುಕಲಾರೆ, ನಾನು ಕಣ್ಮರೆಯಾದ್ದನ್ನು ಕಂಡು ಈವರೆಗೆ ಅವರು ಏನಾಗಿದ್ದಾರೋ, ನೀನು ನನಗೆ ಪ್ರಿಯವನ್ನು ಬಯಸುವೆ ಯಾದರೆ ಬೇಗ ಅಲ್ಲಿಗೆ ನನ್ನನ್ನು ಕರೆದುಕೊಂಡುಹೋಗು – ಎಂದು ಕಾಡಿನಲ್ಲಿ ಗಟ್ಟಿಯಾಗಿ ಅಳುವುದನ್ನು ಕಂಡರೆ ಈ ಕಾಲದವರಿಗೆ ವಿಚಿತ್ರವಾಗಿ ಕಾಣಿಸ ಬಲ್ಲದು. ಸಾವಿತ್ರಿ ಎಂಥ ಗಂಡನನ್ನು ವರಿಸಿದಳು ! ಎಂಥವನಿಗಾಗಿ ಈ ಎಲ್ಲ ಪಾಡುಪಟ್ಟಳು, ವ್ರತ ಹೊತ್ತಳು, ಮೃತ್ಯುವನ್ನು ಎದುರಿಸಿ ಅವನ ಕರುಣೆ ಯನ್ನು ಒಲಿಸಿಕೊಂಡಳು ! ಎನ್ನಿಸುತ್ತದೆ. ಇಲ್ಲಿ ಸತ್ಯವಾನನ ಕೋಮಲವಾದ ಅಂತಃಕರಣ ಗುರುಭಕ್ತಿಗಳನ್ನು ಮಾತ್ರ ಕವಿ ವರ್ಣಿಸುತ್ತಿದ್ದಾನೆ. ಆ ಮುದಿ ತಂದೆತಾಯಿಗಳು ಇವನನ್ನು ಎಷ್ಟು ಪ್ರೀತಿಯಿಂದ ನೋಡಿಕೊಂಡಿದ್ದರೊ ! ದುರ್ಬಲರಾದ ಅವರನ್ನು ಕಾಪಾಡುವುದರಲ್ಲಿ ಮಗನು ಎಷ್ಟು ನಿರತನಾಗಿದ್ದಿರ ಬೇಕು ಎಂಬುದನ್ನು ನಾವು ಊಹಿಸುವುದು ಒಳ್ಳೆಯದು. ಅದಕ್ಕಿಂತ ಹೆಚ್ಚಾಗಿ ಕವಿ ಸಾವಿತ್ರಿಯ ಶೀಲ ಸಂಪನ್ನತೆಯನ್ನು ಸ್ಥಾಪಿಸುತ್ತಿದ್ದಾನೆ. ಇಂಥ ಶೀಲಕ್ಕೆ ಸಾವಿಲ್ಲ. ನೋವಿಲ್ಲ. ಇದೇ ಸಾಧನ, ಇದೇ ಸಿದ್ಧಿ ಎಂಬಂತೆ ಉಪಾಖ್ಯಾನದಲ್ಲಿ ಆಕೆಯ ಚರಿತ್ರೆ ಬೆಳೆದಿದೆ. ಆ ದೃಷ್ಟಿಯಿಂದ ನೋಡ ದಿದ್ದರೆ ಇಂತಹ ಕಥೆ ಪೊಳ್ಳಾಗಿ ಜಳ್ಳಾಗಿ ವ್ಯರ್ಥವಾಗುವುದು.

ಹಾಗೆಯೇ ಇವೊತ್ತಿನ ಕಣ್ಣಿಂದ ನೋಡಿದರೆ ಋಷಿಗಳು ಆಕೆಯನ್ನು ಕೇಳುವ ಪ್ರಶ್ನೆಯೂ ಅಲೌಕಿಕ. ಹುಡುಗರಾದ ದಂಪತಿಗಳು ತಮ್ಮ ಸಂತೋಷದಲ್ಲಿ ಮೈಮರೆತು ಕುಳಿತಿದ್ದು ಮನೆಗೆ ಹೊತ್ತುಮಾಡಿ ಬಂದ ರೆನ್ನೋಣ. ಏಕೆ ಇಷ್ಟು ಹೊತ್ತು ಮಾಡಿಕೊಂಡು ಬಂದಿರಿ ಎಂದು ಕೇಳುವುದು ಅನುಚಿತ. ಮುದುಕರಾದ ತಂದೆತಾಯಿಯರ ಹಂಬಲೇನೊ ಅರ್ಥವಾಗುತ್ತದೆ. ಗೌತಮರ ಪ್ರಶ್ನೆಯೊ ? 'ಗುಟ್ಟೇನೂ ಇಲ್ಲದಿದ್ದರೆ ನಮಗೂ ತಿಳಿಸು' ಎಂಬ ಮನಸ್ಸು ತುಂಬಾ ಎಳಸಾಗಿ ಕಂಡೀತು. ಅದಲ್ಲ, – ಸಾವು ಇಂಥಾ ಉಪಾಖ್ಯಾನದಲ್ಲಿ ನೋಡಬೇಕಾದ್ದು. ಬರಿಯ ಸಂಕೋಚ ಪಡುವ ಸಂದರ್ಭವಾಗಿರಲಾರದು. ಅದು ಇನ್ನೇನೋ ವಿಶೇಷ ನಡೆದಿರಬೇಕು ಎಂಬುದೇ ಗೌತಮರ ಊಹೆ.

ಸಾವಿತ್ರಿಯ ಉಪಾಖ್ಯಾನವನ್ನು ಯಾರು ಓದಲಿ ಅದರ ಸಾರ ಸೌಂದರ್ಯವೂ, ಮಾನವತೆಯೂ ಅವರ ಮನಸ್ಸಿಗೆ ತಟ್ಟುವುದು. ಇಂತಹ ಗುಣ, ಶೀಲ ತನ್ನನ್ನೂ ತನಗೆ ಸಂಬಂಧಪಟ್ಟುದನ್ನೂ ಉಳಿಸಲಾರದು ನಿಲಿಸ ಲಾರದು ಎಂದರೆ ಲೋಕದಲ್ಲಿ ಇನ್ನಾವುದಕ್ಕೂ ಬೆಲೆಯುಂಟು ? ಸಾವಿತ್ರಿಯ ಚರಿತ್ರೆ ಮೃತ್ಯುವನ್ನು ಮೃದು ಮಾಡಿದ ಕಥೆ. ಯಮನು ಧರ್ಮರಾಜನೂ ಹೌದು. ಆತನು ಸತ್ತವರನ್ನು ಹೇಗೆ ತೆಗೆದುಕೊಂಡು ಹೋಗಿ ನಿಯಮಿಸು ವನೋ ಹಾಗೆಯೇ ಬದುಕಬೇಕಾದುದನ್ನು ಬದುಕಿಸಬಲ್ಲವನೂ ಹೌದು – ಎಂಬ ತತ್ತ್ವ ಯಮನ ವರದಾನದಿಂದ ಸಿದ್ಧವಾಗುತ್ತದೆ. ಸಾವು ಬದುಕು ಗಳ ರಹಸ್ಯ ಒಂದು ವಿಶೇಷ ರೀತಿಯಲ್ಲಿ ಚಿತ್ರಿತವಾಗುತ್ತದೆ. ಉಳಿಯ ಬೇಕಾದುದು ಬರಿಯ ದೇಹವಲ್ಲ. ಅದರಲ್ಲಿ ಅಡಗಿರುವ ಗುಣ, ಶೀಲ, ಧರ್ಮ. ದೇಹ ಹೋದರೂ, ಹೋಗಿ ಶತ ಶತಮಾನ ಕಳೆದರೂ ಉಳಿಯುವುದು ಈ ಗುಣ ಶೀಲಗಳ ಚಿತ್ರ ; ಅವುಗಳ ಪರಿಮಳ, – ಇವಕ್ಕೆ ಇರುವ ಬೆಲೆ. ಸಾವಿತ್ರಿ ಯಮ ಇಬ್ಬರೂ ಅಮೃತತ್ತ್ವದ ಈ ರಹಸ್ಯ ವನ್ನು ಈ ಕಥೆಯ ಮೂಲಕ ಲೋಕಕ್ಕೆ ಸಾರಿದ್ದಾರೆ.

---

# ರುರು ಪ್ರಮದ್ವರೆ

ಮಹಾಭಾರತದ ಕಥೆಯನ್ನು ಸೂತ ಪೌರಾಣಿಕನು ಶೌನಕಾದಿ ಋಷಿಗಳಿಗೆ ಹೇಳಿದನಲ್ಲವೆ? ಶೌನಕಾದಿಗಳು ನೈಮಿಶಾರಣ್ಯದಲ್ಲಿದ್ದವರು. ಈ ಸೂತನ ಹೆಸರು ಲೋಮಹರ್ಷಣನ ಮಗ ಉಗ್ರಶ್ರವನೆಂದು. ಸೂತರು ಸಾಮಾನ್ಯವಾಗಿ ನಾಡಗೀತಗಳನ್ನೂ ಇತಿಹಾಸ ಕಾವ್ಯಗಳನ್ನೂ ಕೇಳಿ ನೆನಪಿನಲ್ಲಿಟ್ಟುಕೊಂಡು ಇತರರಿಗೆ ಹೇಳುತ್ತಿದ್ದವರು. ನೈಮಿಶಾರಣ್ಯವಾಸಿಗಳಾದ ಶೌನಕ ಮುಂತಾದವರು ಈ ಸೂತನನ್ನು ಕೇಳಿಕೊಳ್ಳಲು ಅವರಿಗೆ, ವೈಶಂಪಾಯನನು ಜನಮೇಜಯರಾಯನಿಗೆ ಹಿಂದೆ ವಿವರಿಸಿದ ಕಥೆಯನ್ನು ಹೇಳಿದನು. ಶುನಕನ ಮಗ ಶೌನಕ. ಶುನಕನ ತಂದೆ ರುರು. ಎಂದರೆ ಮಹಾಭಾರತ ಕಥೆಯನ್ನು ಕೇಳಿದ ಮಹರ್ಷಿಗಳಲ್ಲಿ ಮುಖ್ಯಸ್ಥರಾದ ಶೌನಕರಿಗೆ ಅಜ್ಜನಾಗುತ್ತಾನೆ.

ಮಹಾಭಾರತದಲ್ಲಿ ಭೃಗುವಿಗೂ ಅವನ ವಂಶದವರಿಗೂ ಸಂಬಂಧಿಸಿದ ಅನೇಕ ಭಾಗಗಳಿವೆ. ದ್ರೋಣ, ಅಶ್ವತ್ಥಾಮ, ಕೃಪ ಇವರೆಲ್ಲ ಭಾರ್ಗವರು. ಅವರು ಆ ಕಾಲದಲ್ಲಿ ಪ್ರಬಲರಾದ ಋಷಿಗಳು, ಬ್ರಾಹ್ಮಣರು ಎಂದು ಕಾಣುತ್ತದೆ. ಇಂದು ಯಾವುದು ವ್ಯಾಸರು ರಚಿಸಿದ ಮಹಾಭಾರತವೆಂದು ಹೆಸರಾಗಿದೆಯೊ ಅದರದು ಭೃಗು ವಂಶದ ಯಾರೊ ರಚಿಸಿದ ಪಾಠ. ರಾಮಾಯಣ ಕಥೆಯಲ್ಲಿ ಬರುವ ಜಮದಗ್ನಿಯೂ ಪರಶುರಾಮನೂ ಭೃಗು ವಂಶದಲ್ಲಿ ಹುಟ್ಟಿದವರು. ಭೃಗು, ಅಂಗೀರಸ ಇವರಿಬ್ಬರಿಗೂ ಅಗ್ನಿಗೂ ವೇದದಲ್ಲಿ ಅನೇಕ ಬಗೆಯ ಸಂಬಂಧವುಂಟು: ಸ್ನೇಹದಲ್ಲಿ, ವಿರೋಧದಲ್ಲಿ. ಅದೆಲ್ಲಾ ಹೇಗೇ ಇರಲಿ, ಈ ಎಲ್ಲ ಪ್ರಕರಣಗಳಲ್ಲಿಯೂ ಭೃಗುವಂಶ ಪ್ರಖ್ಯಾತವಾದುದು, ಪ್ರಬಲವಾದುದು ಎಂಬುದು ಸಂಗತಿ.

ಆದಿಪರ್ವದ ಒಂದು ಭಾಗ ಪೌಲೋಮ ಪರ್ವ. ಪುಲೋಮ ಪುಲೋಮರಿಗೆ ಸಂಬಂಧಿಸಿದ ಕಥೆಯೂ ಭೃಗುವಿನ ಕುಟುಂಬಕ್ಕೆ ಸಂಬಂಧಪಟ್ಟದ್ದೇ. ಪುಲೋಮ ಭೃಗು ಮಹರ್ಷಿಯ ಹೆಂಡತಿ. ಈಕೆಯ ತಂದೆ

ಇವಳನ್ನು ಭೃಗುಮಹರ್ಷಿಗೆ ಮದುವೆ ಮಾಡಿಕೊಡುವ ಮುಂಚೆ ಪುಲೋಮ ನೆಂಬ ರಾಕ್ಷಸನಿಗೆ ಕೊಡುವೆನೆಂದು ಮಾತು ಕೊಟ್ಟಿದ್ದನಂತೆ. ಅದು ತಪ್ಪಿ ಆ ಚೆಲುವೆ ಋಷಿಯ ಹೆಂಡತಿಯಾಗಿ ಆಶ್ರಮದಲ್ಲಿ ವಾಸ ಮಾಡಲು ಬಂದಳು. ಒಂದು ದಿನ ಸ್ನಾನಕ್ಕಾಗಿ ಮಹರ್ಷಿ ಆಶ್ರಮದಿಂದ ಹೊರಗೆ ಹೋಗಿದ್ದಾಗ ಈ ರಾಕ್ಷಸನು ಆಶ್ರಮಕ್ಕೆ ಬರುತ್ತಾನೆ. ಅಲ್ಲಿದ್ದ ಹೆಂಗಸು ನಿಜವಾಗಿ ಭೃಗುವಿನ ಮಡದಿಯಾದ ಪುಲೋಮೆ ಹೌದೊ ಅಲ್ಲವೊ ಎಂದು ಮೊದಲು ನಿಶ್ಚಯ ಮಾಡಿಕೊಳ್ಳಲು ಬಯಸುತ್ತಾನೆ. ಇದನ್ನು ಗೊತ್ತಾಗಿ ಹೇಳುವವರು ಅಲ್ಲಿ ಯಾರೂ ಇರಲಿಲ್ಲ. ಅಗ್ನಿಶಾಲೆಯಲ್ಲಿ ಅಗ್ನಿಯೊಬ್ಬನಿದ್ದನು. 'ಸತ್ಯವಾಗಿ ನುಡಿ; ನನಗೆ ಮದುವೆಮಾಡಿಕೊಡುತ್ತೇನೆಂದು ಹೇಳಿದವಳನ್ನು ಬೇರೆಯವರಿಗೆ ಕೊಟ್ಟು ನನಗೆ ಅವರಪ್ಪ ಅನ್ಯಾಯ ಮಾಡಿದ್ದಾನೆ; ಈಕೆ ಭೃಗುಪತ್ನಿಯಾದ ಪುಲೋಮೆ ಹೌದೊ ಅಲ್ಲವೊ?' ಎಂದು ಅಗ್ನಿಯನ್ನು ದಾನವನು ಕೇಳುವನು. ಅಗ್ನಿ, ಧರ್ಮಸಂಕಟಕ್ಕೆ ಸಿಕ್ಕಿ ಅಸತ್ಯವನ್ನು ನುಡಿಯಲಾರದೆ ಅವಳೇ ಭೃಗುಪತ್ನಿ ಎಂದು ಹೇಳುವನು. ಕಾಡುಹಂದಿಯ ರೂಪವನ್ನು ತಾಳಿ ಆಕೆಯನ್ನು ಎತ್ತಿ ತನ್ನ ಮೇಲೆ ಕೂಡಿಸಿಕೊಂಡು ಪುಲೋಮನು ಓಡಿಹೋಗುತ್ತಿದ್ದನು. ಆಕೆಯ ಗರ್ಭದಲ್ಲಿದ್ದ ಭೃಗುವಿನ ಅಂಶ, ಗಂಡುಮಗುವಿನ ರೂಪದಲ್ಲಿ ದಾರಿಯಲ್ಲಿ ಕೆಳಗೆ ಬಿದ್ದಿತು. ಅದರ ಪ್ರಭಾವದಿಂದ ಪುಲೋಮನು ಸುಟ್ಟು ಬೂದಿಯಾದನು. ಹೀಗೆ ಹುಟ್ಟಿದ ಮಗು ಚ್ಯವನ. ಚ್ಯವನನಿಗೆ ಸುಕನ್ಯೆ ಎಂಬ ಹೆಂಡತಿಯಲ್ಲಿ ಪ್ರಮತಿ ಎಂಬ ಮಗನಾದನು. ಪ್ರಮತಿಗೆ ಘೃತಾಚಿ ಎಂಬ ಅಪ್ಸರ ಸ್ತ್ರೀ ಹೆಂಡತಿ. ಅವರ ಮಗ ರುರು. ಹೀಗೆ ಈ ಸಂತತಿಯನ್ನು ಭೃಗು, ಚ್ಯವನ, ಪ್ರಮತಿ, ರುರು, ಶುನಕ, ಶೌನಕ ಎಂದು ಕ್ರಮದಲ್ಲಿ ಹೇಳಬಹುದು. 'ನಿಮ್ಮ ತಂದೆಗೆ ಮಹಾ ತೇಜಸ್ವಿಯಾಗಿ ಕೀರ್ತಿಶಾಲಿಯಾಗಿ ಭೃಗುವಂಶ ವರ್ಧನನಾದ ನೀನು ಹುಟ್ಟಿ ಉಗ್ರತಪವನ್ನು ನಡಸಿಕೊಂಡು ಬರುತ್ತಿದ್ದೀಯೆ. ನಿನ್ನ ಪಿತಾಮಹನಾದ ರುರು ಮಹರ್ಷಿಯ ಚರಿತ್ರೆಯನ್ನು ವಿವರಿಸುತ್ತೇನೆ, ಕೇಳು' ಎಂದು ಸೂತ ಪೌರಾಣಿಕನು ರುರು ಪ್ರಮದ್ವರೆಯರ ಕಥೆಯನ್ನು ಹೇಳುತ್ತಾನೆ.

## ೧

ಸ್ಥೂಲಕೇಶನೆಂಬ ಮಹರ್ಷಿ ಹಿಂದೆ ಪ್ರಖ್ಯಾತನಾಗಿದ್ದನು. ಆತನು ದೊಡ್ಡ ತಪಸ್ವಿ; ವಿದ್ಯಾವಂತ. ಎಲ್ಲ ಜೀವಿಗಳ ಹಿತದಲ್ಲೂ ಆತನಿಗೆ ಪ್ರೀತಿಯಿತ್ತು. ಒಂದು ಕಾಲದಲ್ಲಿ ವಿಶ್ವಾವಸುವೆಂಬ ಗಂಧರ್ವ ರಾಜನು ಮೇನಕೆಯಲ್ಲಿ ಸಂಬಂಧ ಬೆಳಸಿ ಅವನಿಗೂ ಆ ಅಪ್ಸರೆಗೂ ಒಂದು ಹೆಣ್ಣು ಮಗು ಹುಟ್ಟಿತು. ಸ್ಥೂಲಕೇಶಾಶ್ರಮದ ನದಿಯ ತೀರದಲ್ಲಿ ಈ ಹೆಣ್ಣು ಮಗುವನ್ನು ಬಿಟ್ಟು ತಾಯಿ ತಂದೆಗಳು ಹೊರಟು ಹೋದರು. ದೇವ ಗರ್ಭದಿಂದ ಹುಟ್ಟಿ ಲಕ್ಷ್ಮಿಯಂತೆ ಹೊಳೆಯುತ್ತಿರುವ, ತಾಯಿ ತಂದೆ ಕೈಬಿಟ್ಟ ಈ ಹೆಣ್ಣು ಮಗುವನ್ನು ಸ್ಥೂಲಕೇಶಮಹರ್ಷಿ ನೋಡಿದನು. ಜನಸಂಚಾರವಿಲ್ಲದ ಈ ಪ್ರದೇಶದಲ್ಲಿ ಬಂಧುವರ್ಜಿತವಾದ ಈ ತಬ್ಬಲಿ ಮಗುವನ್ನು ಕಂಡು ಸ್ಥೂಲಕೇಶನಿಗೆ ಕರುಣೆಯುಂಟಾಯಿತು. ಕೃಪಾವಿಷ್ಟನಾದ ಆತನು ಆ ಮಗುವನ್ನು ಎತ್ತಿಕೊಂಡು ಬಂದು ತನ್ನ ಆಶ್ರಮದಲ್ಲಿ ಪೋಷಿಸಿದನು; ಬೆಳಸಿ ದೊಡ್ಡವಳನ್ನಾಗಿ ಮಾಡಿದನು. ರೂಪ ಗುಣಗಳಲ್ಲಿ ವಿಶೇಷರಾದ ಪ್ರಮದೆಯರಲ್ಲಿ ಉತ್ತಮಳಾದ್ದರಿಂದ ಮಹರ್ಷಿ ತನ್ನ ಸಾಕುಮಗಳಿಗೆ ಪ್ರಮದ್ವರೆಯೆಂದು ಹೆಸರಿಟ್ಟನು. ಅದೇ ಆಶ್ರಮದಲ್ಲಿ ಚ್ಯವನ ಮಹರ್ಷಿಯ ಮಗನಾದ ರುರು ಇದ್ದವನು ಪ್ರಮದ್ವರೆಯ ರೂಪು ಗುಣಗಳಿಗೆ ಮೋಹಿಸಿ ಆಕೆಯನ್ನು ಮದುವೆಯಾಗಲು ಬಯಸಿದನು. ತಂದೆಯನ್ನೂ ಇತರ ಗೆಳೆಯರನ್ನೂ ಸ್ಥೂಲಕೇಶರ ಬಳಿಗೆ ಹೋಗಿ ತನಗೆ ಆಕೆಯನ್ನು ತಂದು ಮದುವೆಮಾಡಬೇಕೆಂದು ಪ್ರಾರ್ಥನೆ ಮಾಡಿದನು. ಅವರ ಪ್ರಾರ್ಥನೆಗೆ ಸ್ಥೂಲಕೇಶರು ಒಪ್ಪಿದರು. ಶುಭವಾದ ಉತ್ತರಾ ನಕ್ಷತ್ರದಲ್ಲಿ ರುರು ಪ್ರಮದ್ವರೆಯರಿಗೆ ಲಗ್ನ ನಿಶ್ಚಯವಾಯಿತು.

ಮದುವೆಗೆ ಇನ್ನೂ ಕೆಲವು ದಿನಗಳಿರುವಾಗ ಒಂದು ದಿನ ಸಖಿಯರೊಡನೆ ಸಂಚಾರ ಮಾಡುತ್ತಿದ್ದ ಪ್ರಮದ್ವರೆ ದಾರಿಯಲ್ಲಿ ಮಲಗಿ ನಿದ್ರಿಸುತ್ತಿದ್ದ ಒಂದು ವಿಷಸರ್ಪದ ಮೇಲೆ ಕಾಣದೆ ಕಾಲಿಟ್ಟಳು. ಅವಳ ಕಾಲ ಸಮೀಪಿಸಿತ್ತೆಂದು ಕಾಣುತ್ತದೆ. ಸರ್ಪ ಕೆರಳಿ ಅವಳನ್ನು ಕಚ್ಚಿತು. ಅದರ

ವಿಷ ಏರಿದ ಕೂಡಲೆ ಪ್ರಜ್ಞೆತಪ್ಪಿ ಪ್ರಮದ್ವರೆ ನೆಲದಮೇಲೆ ಬಿದ್ದಳು. ಒಡಲೊಳಗೆ ವಿಷ ಹರಿದು ಆಕೆಗೆ ಮೃತಿಯುಂಟಾಗಿದ್ದರೂ ಆಕೆಯ ಚೆಲುವು ಮಾತ್ರ ಸ್ವಲ್ಪವೂ ಕಡಮೆಯಾಗಲಿಲ್ಲ. ಇನ್ನೂ ಪ್ರಾಣ ಇರುವವಳ ಹಾಗೆಯೇ ನೋಡುವವರ ಕಣ್ಣಿಗೆ ಅವಳ ಆಕೃತಿ ರಮ್ಯವಾಗಿತ್ತು. ಸುಖ ವಾಗಿ ನಿದ್ರೆ ಮಾಡುವವಳಂತೆ ಕಾಣುತ್ತಿದ್ದಳು.

ಅಲ್ಲಿಗೆ ಇಷ್ಟು ಹೊತ್ತಿಗೆ ಬಂದ ಆಕೆಯ ತಂದೆಯೂ ಇತರ ತಪಸ್ವಿಗಳೂ ಇದನ್ನು ಕಂಡರು. ಆಕೆಯ ಸ್ಥಿತಿಗೂ ಗತಿಗೂ ಅಲ್ಲಿದ್ದ ಎಲ್ಲ ದ್ವಿಜವರರೂ ಮರುಕಗೊಂಡರು. ರುರುವಿನ ನಷ್ಟವನ್ನೂ ಅವರು ಸಹಾನುಭೂತಿಯಿಂದ ಅರ್ಥ ಮಾಡಿಕೊಂಡರು. ಸ್ವಸ್ತ್ಯ, ಆತ್ರೇಯ, ಮಹಾಜಾನು, ಕೌಶಿಕ, ಶಂಖಮೇಖಲ, ಭಾರದ್ವಾಜ, ಕೌಣಕುತ್ಸ, ಆರ್ಷ್ಟಿಷೇಣ ಮುಂತಾದವರು ಪ್ರಮತಿಯೊಡನೆ, ಅವನ ಮಗ ರುರುವಿನೊಡನೆ, ಆ ಸ್ಥಳಕ್ಕೆ ಬಂದರು. ವನದಲ್ಲಿ ವಾಸಮಾಡುತ್ತಿದ್ದವರೆಲ್ಲರೂ ಗುಂಪು ಸೇರಿ ಕರುಣಾಜನಕವಾದ ಈ ಸ್ಥಿತಿಯನ್ನು ಕಂಡರು.

ಎಲ್ಲರನ್ನೂ ಶೋಕ ಆವರಿಸಿರುವಾಗ ಈ ದೃಶ್ಯವನ್ನು ನೋಡಲಾರದೆ ರುರು ಅಲ್ಲಿಂದ ಹೊರಕ್ಕೆ ಹೊರಟು ಬಂದನು. ದಟ್ಟವಾದ ಕಾಡಿನೊಳಗೆ ಹೋಗಿ ಬಹುವಾಗಿ ಆಕ್ರಂದನ ಮಾಡುತ್ತ ಒಂಟಿಯಾಗಿ ಕುಳಿತನು. 'ಹಿರಿಯರಿಗೂ ಸುತ್ತಲವರಿಗೂ ನನಗೂ ಇಷ್ಟು ಪ್ರಿಯಳಾದ ಪ್ರಮದ್ವರೆಗೆ ಈ ಗತಿ ಬಂದಿತಲ್ಲ. ಆಕೆಯ ಬಂಧುಗಳಿಗೂ ನನಗೂ ಇದಕ್ಕಿಂತ ಹೆಚ್ಚಿನ ದುಃಖ ಬೇರೆ ಯಾವುದಿದ್ದೀತು? ನಾನು ಮೊದಲಿಂದಲೂ ಗುರು ಶುಶ್ರೂಷೆ ಮಾಡಿ ತಪೋಕಾರ್ಯಗಳಲ್ಲಿ ಶ್ರದ್ಧೆಯಿಂದ ನಿರತನಾಗಿರುವುದು ನಿಜವಾದ ಪಕ್ಷದಲ್ಲಿ, ನನ್ನ ಪೂಜಾಕಾರ್ಯಗಳಿಂದ ನಾನು ದೇವತೆಗಳನ್ನು ತೃಪ್ತಿಪಡಿಸಿರು ವುದು ನಿಜವಾದರೆ, ನನ್ನ ಪ್ರಿಯೆ ಬದುಕಿಕೊಳ್ಳಲಿ. ಹುಟ್ಟಿದಂದಿನಿಂದ ಹಿಡಿದು ನಾನು ದೃಢವ್ರತನಾಗಿ ಇದ್ದಿರುವುದು ನಿಜವಾದರೆ ಈ ಪ್ರಮದ್ವರೆ ಮೃತ್ಯುವಿಂದ ಬಿಡುಗಡೆ ಹೊಂದಿ ಎಂದಿನಂತೆ ಆರೋಗದೃಢಕಾಯಳಾಗಿ ಏಳಲಿ' ಎಂದು ಪ್ರಾರ್ಥಿಸಿದನು.

ದೇವತೆಗಳಿಗೆ ನಿರ್ಬಂಧವುಂಟಾಯಿತು. ಗೋಳಿಡುತ್ತಿರುವ ರುರು ವನ್ನು ಸಮಾಧಾನಗೊಳಿಸುವುದಕ್ಕಾಗಿ ಒಬ್ಬ ದೇವದೂತನು ಅವನ ಬಳಿಗೆ ಬಂದನು. "ಮನುಷ್ಯರಿಗೆ ಹುಟ್ಟಿನೊಡನೆಯೇ ಸಾವು ಕಟ್ಟಿ ಬಂದುದು. ಈಕೆಗೆ ಆಯುಸ್ಸು ಮುಗಿಯಿತು. ಹೀಗಿರುವಾಗ ಈಕೆ ಗಾಗಿ ನಿನ್ನ ಮನಸ್ಸಿನಲ್ಲಿ ಹೀಗೆ ಶೋಕಪಡುವುದು ಸ್ವಲ್ಪವೂ ತಕ್ಕುದಲ್ಲ. ಇಂತಹ ಪ್ರತಿಜ್ಞೆಗಳನ್ನು ಮಾಡಿ ದೇವತೆಗಳನ್ನು ನಿರ್ಬಂಧಪಡಿಸಬಾರದು" ಎಂದನು. ರುರುವಿಗೆ ಸಮಾಧಾನವಾಗಲಿಲ್ಲ. ತಾನು ಪ್ರೀತಿಸಿ ತನಗೆ ಮದುವೆ ಆಗಲಿದ್ದ ಕನ್ಯೆ ಈ ಸ್ಥಿತಿಗೆ ಈಡಾಗಿ ತಮ್ಮ ಪ್ರೇಮ ಭಂಗವಾ ದುದನ್ನು ಆತನು ಸಹಿಸಲಾರದಾದನು. ಅವನ ಪ್ರೀತಿಯ ಆಳವನ್ನು ದೇವದೂತನು ಕಂಡನು. – "ಈಕೆ ಬದುಕಬೇಕಾಗಿದ್ದರೆ ಒಂದೇ ಒಂದು ಉಪಾಯವುಂಟು. ಮಹಾತ್ಮರಾದ ದೇವತೆಗಳು ಈ ಸಂಬಂಧದಲ್ಲಿ ನಿನಗೆ ಅದನ್ನು ತಿಳಿಸಲು ಹೇಳಿದ್ದಾರೆ. ಇಚ್ಛೆಯಿದ್ದು ಒಂದು ಕೆಲಸವನ್ನು ನೀನು ಮಾಡುವೆಯಾದರೆ ನಿನಗೆ ಪುನಃ ಪ್ರಮದ್ವರೆ ದೊರಕುತ್ತಾಳೆ" ಎಂದನು.

ರುರು – ಉಪಾಯ ಯಾವುದು? ನಡಸುತ್ತೇನೆ. ದೇವತೆಗಳು ಹೇಳಿದುದನ್ನು ನನಗೆ ತಿಳಿಸು. ನನ್ನ ಜೀವವನ್ನು ಉಳಿಸು.

ದೂತ – ನಿನ್ನ ಆಯುಸ್ಸಿನ ಅರ್ಧವನ್ನು ಆ ಕನ್ಯೆಗೆ ಧಾರೆ ಎರೆದು ಕೊಡುವೆಯೊ? ನಿನ್ನ ಭಾರ್ಯೆಯಾದ ಪ್ರಮದ್ವರೆ ಬದುಕಿ ಬರುತ್ತಾಳೆ.

ರುರುವಿಗೆ ಇದನ್ನು ಕೇಳಿ ಆನಂದವಾಯಿತು.

ರುರು – ನನ್ನ ಆಯುಷ್ಯದಲ್ಲಿ ಅರ್ಧವನ್ನು ಪ್ರಮದ್ವರೆಗೆ ಕೊಡುತ್ತೇನೆ. ಸುಂದರವಾದ ರೂಪಾಭರಣವುಳ್ಳ ನನ್ನ ಪ್ರಿಯೆ ಬದುಕಿಕೊಳ್ಳಲಿ.

ದೇವದೂತನು ಈ ಸಂಗತಿಯನ್ನು ಧರ್ಮರಾಜನಲ್ಲಿಗೆ ತೆಗೆದುಕೊಂಡು ಹೋಗಿ ಅರಿಕೆ ಮಾಡಿದನು. 'ರುರು ತನ್ನ ಆಯುಷ್ಯದ ಅರ್ಧ ಭಾಗವನ್ನು ತನ್ನ ಹೆಂಡತಿಯಾಗಲಿರುವ ಪ್ರಮದ್ವರೆಗೆ ದಾನ ಮಾಡಿದ್ದಾನೆ. ಈಗ ಮೃತಳಂತಿರುವ ಆಕೆ ಜೀವಂತಳಾಗಿ ಏಳಲಿ' ಎಂದನು. ಧರ್ಮರಾಜನು ಈ ಏರ್ಪಾಡಿಗೆ ಒಪ್ಪಿದನು. 'ದೇವದೂತನೂ ರುರುವೂ ಇಚ್ಛೆ ಪಟ್ಟಂತೆ ರುರುವಿನ ಅರ್ಧಾಯುಷ್ಯವನ್ನು ಪಡೆದು ಅವನೊಡನೆ ಬದುಕಲಿ' ಎಂದು

ಯಮಧರ್ಮನು ಅಪ್ಪಣೆ ಕೊಟ್ಟನು. ಇದಾದ ಕೂಡಲೆ ಸುಂದರಿಯಾದ ಪ್ರಮದ್ವರೆ ನಿದ್ರೆ ಮಾಡುತ್ತಿದ್ದವಳು ಎಚ್ಚರಗೊಂಡು ಎದ್ದಂತೆ ಮೊದಲಿಗಿಂತ ಹೆಚ್ಚಿನ ಚೆಲುವಿಂದ ಎದ್ದು ನಿಂತಳು. ತನ್ನ ಆಯುಸ್ಸಿನಲ್ಲಿ ಅರ್ಧವನ್ನು ಕಡಮೆ ಮಾಡಿಕೊಂಡು ಭಾರ್ಯೆಯ ಆಯುಷ್ಯವನ್ನು ವೃದ್ಧಿಗೊಳಿಸಿದ ರುರುವಿನ ತೇಜಸ್ಸು ಬೆಳಗಿ ಹಿಂದಿಗಿಂತ ಪ್ರಖ್ಯಾತವಾಯಿತು. ಹಿರಿಯರು ಮೊದಲು ಗೊತ್ತುಮಾಡಿದ್ದ ದಿನದಲ್ಲಿಯೇ ಮುಹೂರ್ತದಲ್ಲಿಯೇ ಇಬ್ಬರ ಹಿತೈಷಿಗಳೂ ಸೇರಿ ಅವರಿಗೆ ವಿವಾಹವನ್ನು ನೆರವೇರಿಸಿದರು. ತಾವರೆಯ ಪರಾಗದಂತೆ ಪ್ರಭೆಯುಳ್ಳ ಪ್ರಮದ್ವರೆಯಂಥ ದುರ್ಲಭಳಾದ ಭಾರ್ಯೆಯನ್ನು ಪಡೆದು ಗೊತ್ತಾದ ಆಯುಷ್ಯದ ಕಾಲವನ್ನು ರುರುವಿನ ಒಡಂಬಡಿಕೆಯಂತೆ ಈ ದಂಪತಿಗಳು ಸಂತೋಷದಿಂದಲೂ ತೃಪ್ತಿಯಿಂದಲೂ ಕಳೆದರು. ಆ ಸಮಯ ಒದಗಿದಾಗ ಈ ಲೋಕದ ಸಂಬಂಧವನ್ನು ತ್ಯಾಗಮಾಡಿದರು.

## ೨

ಪ್ರಮದ್ವರೆಯ ಕಥೆ ಎಷ್ಟು ಪ್ರಖ್ಯಾತವಾಗಬಹುದಾಗಿತ್ತೋ ಅಷ್ಟು ಆಗಿಲ್ಲ. ಇದಕ್ಕೆ ಕಾರಣ ಬಹುಶಃ ಅದು ಚಿಕ್ಕದಾಗಿ ಎಲ್ಲೋ ಮೂಲೆಯಲ್ಲಿರುವುದು ಒಂದು: ಮಹಾಭಾರತದಲ್ಲಿ ಇಂಥವು ನೂರಾರು ಇವೆ. ಇದು ಬರುವ ಆದಿಪರ್ವದಲ್ಲಿಯಂತೂ ಇಂಥವು ಹಲವಾರು. ಇದು ಭಾರತದ ಮೂಲ ಕಥೆಗೆ ಸಂಬಂಧಪಟ್ಟುದೂ ಅಲ್ಲ. ಅಲ್ಲಿನ ಮಹಾಪುರುಷರ ಪೂರ್ವಜರನ್ನು ಕುರಿತುದೂ ಅಲ್ಲ. ಮೂಲದಲ್ಲಿ ಮಹಾಭಾರತ ಕ್ಷತ್ರಿಯರ ಕಥೆ, ಯುದ್ಧಕಥೆ. ಋಷಿಗಳ ಸಂತತಿಯನ್ನು ಕುರಿತು ಹೇಳುವಾಗ ಬಂದ ಒಂದು ಋಷಿವಂಶಕ್ಕೆ ಸೇರಿದ ಒಬ್ಬರ ದಾಂಪತ್ಯದ ಕಥೆ ಇದು. ಆದುದರಿಂದ ಕೂಡ ಅದಕ್ಕೆ ಜನದ ಗಮನ ಅಷ್ಟಾಗಿ ದೊರೆಯಲಿಲ್ಲವೋ ಏನೋ. ಮೂಲಗ್ರಂಥ ಬರೆದ ಕಾಲ ಹೋಗಲಿ; ಮುಂದಿನವರೂ ಆ ವಿಷಯವನ್ನು ಹೆಚ್ಚಾಗಿ ಗಮನಿಸಲಿಲ್ಲ; ಪ್ರಸ್ತಾಪಿಸಲಿಲ್ಲ. ಅದರ ಆಧಾರದಮೇಲೆ ಕಾವ್ಯಗಳನ್ನು ಮುಂದಿನ ಕವಿಗಳು ಬೆಳಸಬಹುದಾಗಿತ್ತು. ಆ ಪುಣ್ಯವೂ ಇದಕ್ಕೆ

ದೊರಕಲಿಲ್ಲ. ಇತ್ತೀಚೆಗೆ ಕನ್ನಡದಲ್ಲಿ 'ಶ್ರೀನಿವಾಸ'ರೊಬ್ಬರು ಮಾತ್ರ ಒಂದು ವಿಸ್ತಾರವಾದ ಕವನವನ್ನು ಕಟ್ಟಿ ಇದರ ಸೌಂದರ್ಯವನ್ನು ಹೊಮ್ಮಿಸಿದ್ದಾರೆ. ಅದರ ಸೊಗಸನ್ನೂ ಅದು ಘಟ್ಟದಿಂದ ಘಟ್ಟಕ್ಕೆ ಬೆಳೆಯುವ ರೀತಿಯನ್ನೂ ದೇವತೆಗಳು – ಅದರಲ್ಲಿಯೂ ದೇವೇಂದ್ರನೇ – ಬಂದು ಒಡ್ಡಿದ ಪರೀಕ್ಷೆಯನ್ನೂ ಇಂದ್ರಜಾಲವನ್ನೂ ಆ ಕವನವನ್ನು ಓದಿಯೇ ಅನುಭವಿಸಬೇಕು. ಕಡೆಯ ದಿನ ಬಂದಾಗ ಆ ದಂಪತಿಗಳು ಯಾವ ರೀತಿ ದೈವಾಧೀನರಾದರೆಂಬುದರ ವರ್ಣನೆ ಒಳ್ಳೆಯ ಕಲ್ಪನೆ. ಇಬ್ಬರೂ ಶುಚಿಯಾಗಿ ದಿನದ ಕರ್ಮಗಳನ್ನು ಮುಗಿಸಿ ದೇವರೆದುರು ಬಾಗಿ ನಮಸ್ಕಾರ ಮಾಡಿ ಕುಳಿತರಂತೆ. ದೇವರೆದುರಿಗೆ ಉರಿವ ಎರಡು ದೀಪದ ಕಂಬಗಳಲ್ಲಿನ ದೀಪದ ಬೆಳಕು ಮೇಲಿನ ಮಾಳಿಗೆಯಿಂದ ಬೀಸಿ ಬಂದ ಯಾವುದೋ ಗಾಳಿಗೆ ಒಂದೇ ಸಲ ನಂದಿಹೋದಂತೆ ಅವರ ಜೀವ ನಂದಿತೆಂದು ಅಲ್ಲಿ ವರ್ಣನೆ ಬರುತ್ತದೆ.

> "......................ನೆಲನೊಳಿರುವ ದಿನ ಮುಗಿದಿರಲು,
> ಇಬ್ಬರೂ ಒಂದೆ ಹೊತ್ತಲಿ ತನುವ ನೀಗಿದರು.
> ಆ ಉದಯ, ರುರು ಮಿಂದು ಮಿಂದ ಸತಿಯನು ಕರೆದು
> ದೇವಸಾನ್ನಿಧ್ಯದಲಿ ಜೊತೆಗೆ ಪೂಜೆಯ ನಡಸಿ
> ಅವಳ ಕೈ ಹಿಡಿದು ಕುಳಿತನು. ಕಣ್ಣಿನಲಿ ಕಣ್ಣ
> ನಿಲಿಸಿ ನೋಡಿದನು. ಕೈ ಮೈಗಳನು ಬೆಸೆದವು;
> ನೋಟ ಜೀವಗಳ ಬೆಸೆದವು. ಒಲವ ಸಂತಸದ
> ಶಾಂತಿಯಲಿ ದಂಪತಿಗಳಿರೆ, ಗವಾಕ್ಷದಿ ಹಾಯ್ದು
> ಬೀಸಿದೊಂದೇ ಗಾಳಿ ದೇವರೆದುರಿನ ಎರಡು
> ದೀಪವನು ನಂದಿಸುವ ರೀತಿ, ಇವರುಸಿರುಗಳ
> ವೃತ್ತ್ಯು ಒಂದೇ ಕ್ಷಣದಿ ನಂದಿಸಿತು. ಇಂತಿವರು
> ದೇವಲೋಕವ ಸಾರಿದರು........................"

– (ಶ್ರೀನಿವಾಸ)

ಮೂಲ ಪ್ರಮದ್ವರೆಯ ಕಥೆಯನ್ನು ಮರೆತ ಜನ ಇದನ್ನು ಕೂಡ ಎಲ್ಲಿ ಅಲಕ್ಷಿಸಿಯಾರೋ ಎನ್ನಿಸುತ್ತದೆ. ಜನರ ಗಮನ ದೊರೆಯದೆ ಮರೆಯಲ್ಲಿ

ಅಂದಿನ ಆ ಕೃತಿಯಂತೆ ಇಂದಿನ ಈ ಕೃತಿಯೂ ಮರೆತುಹೋಗದಿರಲೆಂದು ಹಾರೈಸಬೇಕಾಗಿದೆ.

ಈ ಕಥೆಯ ನಾಯಕನು ಮಹರ್ಷಿಯೊಬ್ಬನು. ತಾನು ಮೆಚ್ಚಿದ ಒಂದು ಹೆಂಗಸಿಗಾಗಿ ತನ್ನ ಜೀವವನ್ನು ಹ್ರಸ್ವಮಾಡಿಕೊಂಡನು ಎಂಬುದು ಗಂಡುತನದ ಹೆಕ್ಕಳವನ್ನು ತಗ್ಗಿಸಿತು. ಗಂಡುಕುಲದ ಅಪಕೀರ್ತಿಗೆ ಕುಂದು ತಂದಿತು ಎಂದು ಜನರಿಗೆ ತೋರಿದ್ದರೂ ಅಚ್ಚರಿಯೇನಲ್ಲ. ಹೆಣ್ಣು ಗಂಡಿಗಾಗಿ ಸಾಯಬಹುದು; ಜೀವ ತೆರಲು ಸಿದ್ಧವಾಗಬಹುದು. ಅದು ಪತಿವ್ರತೆಯ ಧರ್ಮ. ಒಂದು ಹೆಣ್ಣಿನ ಪ್ರೀತಿಗೋಸ್ಕರವಾಗಿ ಗಂಡು ಜೀವಬಿಡುವುದೆಂದರೆ ಗಂಡಿನ ಮಾನಕ್ಕೆ ಕಷವೆ. ಒಬ್ಬ ಹೆಂಡತಿ ಹೋದರೆ ಇನ್ನೊಬ್ಬಳನ್ನು, ಮತ್ತೊಬ್ಬಳನ್ನು ಮದುವೆಯಾಗುವ ಅವಕಾಶವೂ ಧಾರಾಳವೂ ಗಂಡಸಿಗೆ ಮೊದಲಿಂದಲೂ ಇದೆ. ಇಂಥ ಸಂದರ್ಭಗಳಲ್ಲಿ ಹಳೆಯ ಬಟ್ಟೆ ಹೋದರೆ ಹೊಸದನ್ನು ಕೊಂಡರಾಯಿತು ಎನ್ನುವ ಮನೋವೃತ್ತಿ ಸಾಧಾರಣ. ಮದುವೆಯಾದ ಹೆಣ್ಣನ್ನು ಒಂದು ಪಾದರಕ್ಷೆಗೆ ಹೋಲಿಸಿ ಅದು ಹಳತಾಗಿ ಕಿತ್ತುಹೋದರೆ ಮತ್ತೊಂದನ್ನು ಕೊಂಡು ಮೆಟ್ಟಬಹುದು ಎಂಬಂತೆ ಮಾತ ನಾಡುವುದು ಸಾಮಾನ್ಯ. ರುರುವಿನಂತಹ ಮಹರ್ಷಿ ಇನ್ನೂ ಮದುವೆ ಯಾಗದ ಅಪ್ಸರೆಯ ಮಗಳಾದ ಒಬ್ಬ ಹುಡುಗಿಗಾಗಿ ಅತ್ತು ಗೋಳಾಡಿದ, ದೇವತೆಗಳನ್ನು ಬೇಡಿದ, ತನ್ನ ಆಯುರ್ಮಾನದ ಅರ್ಧವನ್ನು ಅವಳಿಗೆ ಎರೆದು ಅವಳನ್ನು ಬದುಕಿಸಿಕೊಂಡ ಎಂದರೆ ಎಂಥ ಖಿಲ ಅವನು! ಎಂಥ ಗಂಡಸು! ಎನ್ನಿಸಿರಬೇಕು. ಬೆಲೆಯ ಈ ವಿಪರೀತ ಎಲ್ಲ ಹಿಂದಿನ ಕಾಲ ದಲ್ಲಿಯೂ ಎಲ್ಲೆಲ್ಲಿಯೂ ಇದ್ದುದೇ. ಇಂದಿಗೂ ಇನ್ನೂ ನಡೆದುಬಂದಿರುವ ದೃಷ್ಟಿ, ನೀತಿ. ಇಂಥ ಕಥೆಗೆ ಪ್ರಾಶಸ್ತ್ಯ ಕೊಟ್ಟು, ಹಿಗ್ಗಿ ಹೊಗಳುವುದು ಸಮಾಜಕ್ಕಾಗಲಿ ಪುರುಷ ಕವಿಗಳಿಗಾಗಲಿ ಮನಸ್ಸಿಗೆ ಬರಲಿಲ್ಲವಾಗಿರಬೇಕು.

ಇದು ನ್ಯಾಯವೋ ಅಲ್ಲವೋ ಅದನ್ನು ನಾವು ಯೋಚಿಸಬೇಕಾದ್ದಿಲ್ಲ. ನಮಗೆ ದೊಡ್ಡದಾಗಿ ಕಾಣುವುದು ಇಲ್ಲಿನ ಪ್ರೇಮದ ಸ್ವರೂಪ. ಅಲ್ಪಾಯು ವಾದ ಸತ್ಯವಾನನನ್ನು ಸಾವಿತ್ರಿ ಬದುಕಿಸಿಕೊಂಡಳು ಎಂದು ಸಾವಿತ್ರಿಗೆ ಗೌರವ ಮಾಡಿರುವ ಜನ ಪ್ರಮದ್ವರೆಗಾಗಿ ತನ್ನ ಜೀವವನ್ನು ಕೊರೆ ಮಾಡಿ

ಕೊಂಡ ಎಂದರೆ ಏಕೆ ಸಂಕೋಚ ಪಡಬೇಕು? ಪ್ರೇಮ ಪ್ರೇಮವೇ. ನಿಷ್ಠೆ ನಿಷ್ಠೆಯೇ. ಅದು ಶುಚಿಯೂ ದೃಢವೂ ಆದರೆ ಅದೊಂದೇ ನಮ್ಮ ಎಣಿಕೆಗೆ ಬರಬೇಕಾದ ಸಂಗತಿ. ಈ ಕಥೆಯಲ್ಲಿ ಪ್ರಮದ್ವರೆಯ ಗುಣ ಪನ್ನು ಕುರಿತ ಹೆಚ್ಚು ವಿವರಗಳಿಲ್ಲ. ಅವಳ ಗುಣಗಳನ್ನು ವಿಸ್ತಾರವಾಗಿ ವರ್ಣಿಸಿ ಇಂಥ ಋಷಿಯ ಪ್ರೇಮಕ್ಕೆ ತಕ್ಕಂಥ ಪಾತ್ರಳಾಗಿದ್ದಳು ಎಂದಿದ್ದರೆ ಆಕೆ ಹೆಚ್ಚು ಸ್ವೀಕಾರ ಯೋಗ್ಯಳಾಗುತ್ತಿದ್ದಳೇನೊ. ಆ ವರ್ಣನೆ ಬೆಳೆಯಲಿಲ್ಲ. ಹಾಗೆ ನೋಡಿದರೆ ಸಾವಿತ್ರಿಯ ಕಥೆಯಲ್ಲಿ ಸತ್ಯವಾನನ ವರ್ಣನೆ ಕೂಡ ಅಷ್ಟು ವಿಸ್ತಾರವಾದ್ದಲ್ಲ. ಅಲ್ಲಿ ಮದುವೆಯಾದ ಮೇಲೆ ಕೆಲವು ದಿನ ಸಂಸಾರ ಮಾಡಿ ಆ ದಂಪತಿಗಳು ಒಬ್ಬರೊಬ್ಬರ ಪ್ರೀತಿ ವಿಶ್ವಾಸಗಳಿಗೆ ಬೆಲೆ ಕೊಡಲು ಕಲಿಯುವ ಅವಕಾಶವಾದರೂ ಇತ್ತು. ಇಲ್ಲಿ ಆ ಅವಕಾಶವೂ ಇಲ್ಲ. ಬಾಣಭಟ್ಟನ ಕಾದಂಬರಿಯಲ್ಲಿ ಮಹಾಶ್ವೇತೆ ಪುಂಡರೀಕನನ್ನು ನೋಡಿದುದು ಎಷ್ಟು ಹೊತ್ತು? ಅವನೊಡನೆ ಎಷ್ಟು ಹೊತ್ತು ಮಾತನಾಡಿದಳು? ಆದರೂ ಅವನ ಅಗಲಿಕೆ ಆಕೆಗೆ ಎಷ್ಟು ದುಸ್ಸಹವಾಯಿತು! ವಿರಹದ ಬೇಗೆಯಿಂದ ಅವನು ಸತ್ತು ಹುಟ್ಟಿ ಮೂರು ಜನ್ಮಗಳು ದಾಟಬೇಕಾಗಿ ಬಂದರೂ ಅವನಿಗಾಗಿ ಆಕೆ ತಪಿಸ ಲಿಲ್ಲವೆ? ಅವನನ್ನು ಬದುಕಿಸಲು ಯತ್ನ ಮಾಡಲಿಲ್ಲವೆ? ತಾನು ಅವನಿಗಾಗಿ ಕಾಸಲಿರಲಿಲ್ಲವೆ? ಆ ಪ್ರೇಮದ ಚರಿತ್ರೆ ಅಲ್ಲಿ ಅಮರ ವಾಯಿತು. ಪ್ರತಿಭಾವಂತನಾದ ಕವಿಯ ಕೈಗೆ ರುರು ಪ್ರಮದ್ವರೆಯರ ಕಥೆ ಸಿಕ್ಕಿದ್ದರೆ ಅದರ ಸೌಭಾಗ್ಯ ಅರಳಿ ಅದರ ಚಿತ್ರವೂ ದಿವ್ಯವಾಗುತ್ತಿತ್ತು.

ಈ ಅಲ್ಪಾವಕಾಶದಲ್ಲಿ ಕೂಡ ಅದು ಸುಂದರವಾಗಿಯೇ ಇದೆ. ಶಕುಂತಲೆಯನ್ನು ವಿಶ್ವಾಮಿತ್ರನಿಗೆ ಹೆತ್ತ ಮೇನಕೆಯೇ ವಿಶ್ವಾವಸುವಿಗೆ ಪ್ರಮದ್ವರೆಯನ್ನು ಹೆರುತ್ತಾಳೆ. ಅಲ್ಲಿ ತಾಯಿತಂದೆಯರು ಮಗುವನ್ನು ಬಿಟ್ಟು ಹೋದಂತೆಯೇ ಇಲ್ಲಿಯೂ ನೀರಿನ ತಡಿಯಲ್ಲಿ ಇವಳನ್ನು ಬಿಟ್ಟು ಹೋಗುತ್ತಾರೆ. ಅಲ್ಲಿ ಕಣ್ವಕಾಶ್ಯಪರು ಶಕುಂತಲೆಯನ್ನು ಎತ್ತಿಕೊಂಡು ಬಂದು ಪ್ರೀತಿಯಿಂದ ಸಾಕಿ ಬೆಳಸಿದರೆ ಇಲ್ಲಿ ಸ್ಥೂಲಕೇಶ ಋಷಿಗಳು ಪ್ರಮದ್ವರೆಯನ್ನು ಹಾಗೆ ಬೆಳಸುತ್ತಾರೆ. ಈ ಋಷಿವಾತ್ಸಲ್ಯ ದಿವ್ಯವಾ

ದುದು. ಸಮಾಜದಲ್ಲಿ ಇಂಥ ಮಕ್ಕಳನ್ನು ಕಂಡರೆ ಒಂದು ಹೀನಭಾವನೆ ಬರುವುದು ಎಲ್ಲರೂ ಕಂಡ ಸಂಗತಿ. ಋಷಿಯಂತೆ ಶುಭ್ರಕೀರ್ತಿಯುಳ್ಳ ವಿಶಾಲ ಹೃದಯವುಳ್ಳ ವ್ಯಕ್ತಿಗೆ ಮಾತ್ರ ಅಂಥವರನ್ನು ದಯೆಯಿಂದಲೂ ಪ್ರೀತಿಯಿಂದಲೂ ಕಾಣುವುದು ಸಾಧ್ಯ. ಹೊಣೆಗಾರಿಕೆಯನ್ನು ಲಕ್ಷಿಸದೆ ತಾಯಿತಂದೆಗಳು ಇಂತಹ ಕರ್ಮಲೇಪಗಳನ್ನು ಲೋಕದಲ್ಲಿ ಬಿಟ್ಟುಹೋದರೆ ಲೋಕ ಅವರನ್ನು ದೂಷಿಸಬಹುದು. ಸಿಕ್ಕಿದರೆ ಶಿಕ್ಷೆ ಮಾಡಬಹುದು. ಅವರ ತಲೆಯ ಮೇಲೆ ಈ ಮಕ್ಕಳ ಹೊಣೆಗಾರಿಕೆಯನ್ನು ಹೊರಿಸಿ ಅವರನ್ನು ಬೆಳಸುವ ಕರ್ತವ್ಯವನ್ನು ಅವರು ನಿರ್ವಹಿಸುವಂತೆ ವಿಧಿಸಬಹುದು. ಸಿಕ್ಕದಿರುವಾಗ ಎಲ್ಲ ಇತರ ಮಕ್ಕಳ ಹಾಗೆಯೇ ಹುಟ್ಟಿದ ಇಂತಹ ಮಕ್ಕಳು ಮಾಡಿದ ಅಪರಾಧವೇನು ? ಅವರನ್ನು ನೋಡಿಕೊಳ್ಳು ವವರಾರು ? ಅವರ ಗತಿ ಏನು ? ಆದರೆ ಜನ ಅಷ್ಟು ಉದಾರವಾಗಿ ಎಣಿಸದು. ಈ ಮಕ್ಕಳನ್ನು ಸಾಕಾದಷ್ಟು ಆದರದಿಂದ ಕಾಣುವುದಾಗಲಿ ಪೋಷಿಸುವುದಾಗಲಿ ಅಪೂರ್ವ. ಇದು ಸಮಾಜ ಮಾಡುವ ಅನ್ಯಾಯ. ಸಮಾಜದ ಜನ ಇಂಥ ಸನ್ನಿವೇಶದಲ್ಲಿ ಹಿಂಜರಿಯುತ್ತದೆ. 'ಸರ್ವಭೂತ ಹಿತೇ ರತಃ' ಎಂದು ಮೇಲೆ ಮೇಲೆ ವರ್ಣನೆ ಬರುವ ಸ್ಥೂಲಕೇಶರಂಥ ಋಷಿಗಳ ಭಾಗಕ್ಕೆ ಈ ಪುಣ್ಯ ಬರುತ್ತದೆ. ಅವರು ಯಾವ ಸಂಕೋಚ ವನ್ನೂ ಅನುಭವಿಸದೆ ಇಂಥ ಜೀವಿಗಳನ್ನು ಎತ್ತಿಕೊಳ್ಳುತ್ತಾರೆ; ಲಾಲಿಸು ತ್ತಾರೆ. ಪಾಲಿಸುತ್ತಾರೆ. ಉದ್ಧರಿಸುತ್ತಾರೆ.

ಇಂತಹ ಮಗು ಬೆಳೆದು ರೂಪ ಗುಣ ಸಂಪನ್ನೆಯಾದಾಗ ಇದನ್ನು ನೋಡಿ ಮೋಹಗೊಳ್ಳುವುದು ಯಾರಿಗಾದರೂ ಸಹಜವೇ. ಶಕುಂತಲೆ ಕ್ಷತ್ರಿಯನಾದ ವಿಶ್ವಾಮಿತ್ರ, ಅಪ್ಸರೆಮೇನಕೆಯರ ಮಗುವಾದರೆ ಪ್ರಮದ್ವರೆ ಗಂಧರ್ವನಾದ ವಿಶ್ವಾವಸುವಿಗೂ ಅಪ್ಸರೆಯಾದ ಮೇನಕೆಗೂ ಮಗುವಾದ ವಳು. ಶಕುಂತಲೆ ಕ್ಷತ್ರಿಯನಿಗೆ ಮನಸೋತಳು. ಇಲ್ಲಿ ಋಷಿಗೂ ಅಪ್ಸರೆಗೂ ಮಗನಾಗಿ ಹುಟ್ಟಿದ ರುರುವಿನ ಮನಸ್ಸು ಈ ದೇವಕನ್ಯೆಯ ಕಡೆ ಒಲಿಯಿತು. ಅಲ್ಲಿ ದುಷ್ಯಂತನ ಪ್ರೇಮ ಸ್ಥಿರವಾದ್ದಲ್ಲ. ಶಕುಂತಲೆ ಕಷ್ಟಪಟ್ಟು ತನ್ನ ದಾಂಪತ್ಯವನ್ನು ಕೂಡಿಸಿಕೊಳ್ಳಬೇಕಾಯಿತು. ಅಲ್ಲಿ

ಆದದ್ದು ಹಿರಿಯರಾರಿಗೂ ತಿಳಿಯದ ಗಾಂಧರ್ವವಿವಾಹ. ಇಲ್ಲಿ ಈ ತಂದೆ ಬಾಂಧವರು ರುರುವಿಗಾಗಿ ಸ್ಥೂಲಕೇಶರಲ್ಲಿಗೆ ಹೋಗಿ ಅವರನ್ನು ಒಪ್ಪಿಸಿ ಮದುವೆಗೆ ಏರ್ಪಡಿಸುವರು. ಇಂತಹ ಬಾಂಧವ್ಯದಲ್ಲಿ ಹೀನಾಯವಿದೆ ಎಂದು ಯಾರ ಎಣಿಕೆಗೂ ಬರುವುದಿಲ್ಲ. ಗಂಧರ್ವ ಅಪ್ಸರೆಯರ ಚರ್ಯೆ ಯನ್ನು ಯಾರೂ ಆಕ್ಷೇಪಿಸುವುದಿಲ್ಲ. ಋಷಿ ದೇವಕನ್ಯೆಯರ ವಿವಾಹ ಬಾಂಧವ್ಯ ಕೀಳುಮಟ್ಟದ್ದೆಂದು ಭಾವಿಸುವವರಿಲ್ಲ. ಒಲಿದು ಒಪ್ಪಿದುದೇ ಸಂಬಂಧ. ರುರುವಿನ ಮನಸ್ಸು ಪ್ರಮದ್ವರೆಯಲ್ಲಿ ನಟ್ಟಾಗಿಂದ ಪ್ರಮದ್ವರೆ ಯನ್ನು ತನಗೇ ಮಾಡಿಕೊಳ್ಳಬೇಕು ಎಂದಿತು. ಆ ನಡುವೆ ಬರಬಹುದಾದ ಅಡ್ಡಿ ಅಡಚಣೆಗಳು ನಿವಾರಣೆ ಆಗಬೇಕು. ಯಾವ ಸ್ವಾರ್ಥವೂ ನಡುವೆ ಬರಬಾರದು, ಬರಗೊಡುವುದಿಲ್ಲ ಎಂಬುದು ಆತನು ಮಾಡಿಕೊಂಡ ನಿಶ್ಚಯ. ಮನಸ್ಸು ನಿರ್ಣಯಿಸಿತು; ತ್ಯಾಗಕ್ಕೆ ಸಿದ್ಧವಾಯಿತು. ಇಂಥ ದೃಢ ವ್ರತರ ಮುಂದೆ ದೇವರೂ ಮಾನವರೂ ಧರ್ಮರಾಜನೂ ಅಶಕ್ತರು.

ಆದ್ದರಿಂದಲೇ ಅದನ್ನು ಕಂಡು ದೇವತೆಗಳು ಅವನಿಗೆ ಉಪಾಯವನ್ನು ಸೂಚಿಸಿದರು. ನಿರ್ಬಂಧವನ್ನು ಹಾಕಿದರೆ ಇವನು ಒಪ್ಪುತ್ತಾನೆಯೊ ಇಲ್ಲವೊ ನೋಡೋಣ ಎಂಬುದು ಅವರು ಮಾಡಿದ ಪರೀಕ್ಷೆ. ಜೀವವನ್ನು ತೆರಲು ಸಿದ್ಧನಾಗುವುದು ಎಲ್ಲಕ್ಕಿಂತ ಅತಿಶಯವಾದ ಸಿದ್ಧತೆ. ಪ್ರೀತಿಯ ವಸ್ತುವಿಗಾಗಿ ಜೀವವನ್ನು ತೆರುತ್ತೇನೆ ಎಂದಾಗ ಆ ಪ್ರೇಮ ದೊಡ್ಡದಾಗು ವುದು. ಅಂಥ ಪ್ರೇಮಕ್ಕೆ ದೇವರು ಬೆಲೆ ಕೊಡದೆ ಹೋದರೆ ಇನ್ನಾರು ಕೊಡಬೇಕು? ಇನ್ನಾವುದಕ್ಕೆ ಕೊಡಬೇಕು? ದೇವತೆಗಳು ಇವರ ಸಾವನ್ನು ಬಯಸಲಿಲ್ಲ. ಉಳಿದಿರುವ ಇವನ ಆಯುಷ್ಯದಲ್ಲಿ ಅರ್ಧ ಭಾಗವನ್ನು ಮಾತ್ರ ಕೇಳಿದರು. ಅವನೊಬ್ಬನೇ ಹೆಚ್ಚು ಕಾಲ ಬದುಕಬಹುದಾದ ಅವಕಾಶವಿರುವಾಗ ಇನ್ನೊಬ್ಬರಿಗೆ ಅದರಲ್ಲಿ ಭಾಗ ಕೊಟ್ಟು ಅದನ್ನು ಕಡಮೆ ಮಾಡಿಕೊಳ್ಳುವುದು ಇಷ್ಟವಾಗದಿರಬಹುದು. ಪ್ರಮದ್ವರೆ ಬದುಕು ವುದಾದರೆ ಯಾವುದಕ್ಕೂ ರುರು ಒಪ್ಪುವವನೇ. ಅವಳು ಬದುಕಿ ದಾಂಪತ್ಯ ದಲ್ಲಿ ಬಾಳಿ ಸಂತೋಷ ಪಡುವ ಅವಕಾಶ ದೊರೆತರೆ ಸಾಕು. ನೂರು ವರುಷ, ಸಾವಿರ ವರುಷ ಸುಮ್ಮನೆ ಉಸಿರು ಹೊತ್ತು ಬದುಕಿದರೆ ಬಂತೇ

ಭಾಗ್ಯ? ಕಲ್ಲು ಹೆಚ್ಚು ಕಾಲ ನಿಲ್ಲುವುದು. ದೊಡ್ಡ ಬಾಳೂ ಸಂತುಷ್ಟಿಯ ಬಾಳೂ ವರುಷ ನೂರು ಬಾಳಿದರೂ ಒಂದೇ; ಅರ್ಥವಾಗಿ, ಹ್ರಸ್ವವಾಗಿ ಬಾಳಿದರೂ ಒಂದೇ. ಒಂದು ಕ್ಷಣಕಾಲ ಮಾತ್ರ ಪ್ರೇಮದ ಬೆಳ್ಳುರಿ ಬೆಳಗಿ ಪ್ರಿಯರು ಮೃತಿಗೊಂಡರೂ ಒಂದೇ. ಗುಣಕ್ಕೆ ಕಾಲಮಾನದ ಎಣಿಕೆ ಸಲ್ಲದು. ಅದು ಮನಸ್ಸಿನ ಒಂದು ಸಿಷ್ಮೆಗೆ ಸಂಬಂಧಿಸಿದ ನಡವಳಿಕೆ. ಮನಸ್ಸು ತೆತ್ತ ಕಡೆ ಮನಸ್ಸನ್ನು ಸಿಲ್ಲಿಸುವುದೂ ಸರ್ವಾತ್ಮನಾ ಅದಕ್ಕಾಗಿ ಉಳಿದ ಪ್ರಯೋಜನವನ್ನು ತ್ಯಾಗ ಮಾಡಲು ಸಿದ್ಧವಾಗುವುದೂ ಶುಭ ಚಾರಿತ್ರದ ಲಕ್ಷಣ. ಅಂಥ ಒಂದು ಚಾರಿತ್ರದ ಕಥೆ ರುರು ಪ್ರಮದ್ವರೆ ಯರದು.

---

# ಸುಕನ್ಯೆ ಚ್ಯವನ

ರುರು ಮಹರ್ಷಿಯ ಕಥೆಯನ್ನು ಹೇಳುವಾಗ ಅವನು ಭೃಗು ವಂಶದಲ್ಲಿ ಹುಟ್ಟಿದವನು, ಅವನ ಮಗ ಚ್ಯವನ, ಚ್ಯವನನ ಹೆಂಡತಿ ಸುಕನ್ಯೆ ಎಂದು ತಿಳಿಸಿತು. ಈಕೆಯ ಕೀರ್ತಿಯೂ ಭರತಖಂಡದಲ್ಲಿ ಬಹಕಾಲದಿಂದ ನಿಂತಿದೆ. ರಾಮಾಯಣದಲ್ಲಿ ಕೂಡ, ಸುಂದರಕಾಂಡದಲ್ಲಿ, ಸತಿಯರಲ್ಲಿ ಸುಕನ್ಯೆ ಮಾದರಿಯೆಂಬ ಸೀತೆಯ ವಾಕ್ಯವಿದೆ. ಪ್ರಾಚೀನ ಮಹಿಳೆಯರಾದ ಶಚಿ, ಲೋಪಾಮುದ್ರೆ, ಸಾವಿತ್ರಿ, ರೋಹಿಣಿ, ಅರುಂಧತಿ, ಕೇಶಿನಿ, ಶ್ರೀಮತಿ, ದಮಯಂತಿಯರಂತೆ ಸುಕನ್ಯೆಯ ಹೆಸರು ಪಾತಿವ್ರತ್ಯಕ್ಕೆ ಹೆಸರಾದುದು.

ಪಾಂಡವರು ವನವಾಸ ಕಾಲದಲ್ಲಿ ನರ್ಮದೆಯನ್ನು ದಾಟಿ ಇಳಿಯುತ್ತಾರೆ. ಅಲ್ಲಿ ಅವರಿಗೆ ವೈಡೂರ್ಯ ಪರ್ವತವನ್ನು ತೋರಿಸುತ್ತ ಲೋಮಶಋಷಿ ಈ ಪ್ರದೇಶ ತ್ರೇತೆಗೂ ದ್ವಾಪರಕ್ಕೂ ಸಂಧಿಸ್ಥಾನ; ಇದರ ದರ್ಶನದಿಂದ ಎಲ್ಲ ಪಾಪಗಳೂ ಪರಿಹಾರವಾಗುತ್ತವೆ; ಇಲ್ಲೇ ಹಿಂದೆ ಶರ್ಯಾತಿ ಮಹಾರಾಜನು ಯಜ್ಞ ಮಾಡಿದ್ದು; ಇಲ್ಲೇ ಇಂದ್ರನೊಡನೆ ಅಶ್ವಿನಿ ದೇವತೆಗಳು ಮೊದಲು ಸೋಮವನ್ನು ಕುಡಿದುದು; ಇಲ್ಲಿಯೇ ಚ್ಯವನ ಋಷಿಯ ಮೇಲೆ ಇಂದ್ರನು ಕೋಪಿಸಿಕೊಂಡು ವಜ್ರಾಯುಧವನ್ನು ಪ್ರಯೋಗಮಾಡಿದ್ದು; ಋಷಿಯ ಪ್ರಭಾವದಿಂದ ಇಂದ್ರನು ಎತ್ತಿದ ಕೈ ಚಲಿಸದೆ ಸ್ತಂಭಿಸಿ ನಿಂತದ್ದು; ಇಲ್ಲಿಯೇ ರಾಜಪುತ್ರಿಯಾದ ಸುಕನ್ಯೆಯನ್ನು ಭಾರ್ಯೆಯಾಗಿ ಪಡೆದು ಚ್ಯವನ ಋಷಿ ಸಂಸಾರಮಾಡಿ ಸುಖವಾಗಿದ್ದದ್ದು – ಎನ್ನುವಲ್ಲಿ ಈ ಸಂಗತಿಯನ್ನು ಕೇಳಿ ಯುಧಿಷ್ಠಿರನ ಕುತೂಹಲ ಕೆರಳಿತು. ಪಾಕಶಾಸನನ ಕೈ ಚಲಿಸದೆ ನಿಂತುದು ಹೇಗೆ? ಭಾರ್ಗವ ಋಷಿಯ ಕೋಪವೇಕೆ ಕೆರಳಿತು? ಅಶ್ವಿನಿ ದೇವತೆಗಳ ಈ ಸೋಮಪಾನದ ಕಥೆ ಯಾವುದು? ಎಲ್ಲವನ್ನೂ ನಡೆದುದು ನಡೆದಂತೆ ದಯಮಾಡಿ ತಿಳಿಸಬೇಕು ಎನ್ನುವನು.

## ಸುಕನ್ಯೆ ಚ್ಯವನ

## ಲೋಮಶನು ಹೇಳಿದ ಕಥೆ.

### ೧

ಭೃಗು ಮಹರ್ಷಿಗೆ ಚ್ಯವನನೆಂಬ ಮಗನಿದ್ದನು. ಇವರ ಆಶ್ರಮದ ಬಳಿ ಒಂದು ಸರೋವರವಿತ್ತು. ಆ ಸರೋವರದ ತಡಿಯಲ್ಲಿ ಚ್ಯವನನು ದೊಡ್ಡ ತಪಸ್ಸನ್ನು ಮಾಡುತ್ತಿದ್ದನು. ಆ ಸಮಯದಲ್ಲಿ ಮಹಾ ತೇಜಸ್ವಿಯಾದ ಆತನು ಸ್ಥಾಣುವಿನಂತೆ ಕುಳಿತಿದ್ದನು. ಬಹು ಕಾಲ ಒಂದೇ ಸ್ಥಳದಲ್ಲಿ ಹೀಗೆ ಕುಳಿತದ್ದರಿಂದ ಅವನ ಸುತ್ತಲೂ ಹುತ್ತ ಬೆಳೆದುಕೊಂಡಿತು. ಹುತ್ತದ ಸುತ್ತಲೂ ಬಳ್ಳಿಗಳು ಹಬ್ಬಿಕೊಂಡವು. ಆ ತುಂಬ ಇರುವೆಗಳು ಮುತ್ತಿಕೊಂಡು ಅಲ್ಲಿ ವಾಸ ಮಾಡತೊಡಗಿದವು. ಈ ಎಲ್ಲ ಒಟ್ಟು ಒಂದು ದೊಡ್ಡ ಮಣ್ಣಿನ ಮುದ್ದೆಯಂತೆ ಕಾಣಿಸುತ್ತಿತ್ತು. ಹುತ್ತ ಸುತ್ತಿರಲು ನಡುವೆ ತಪಸ್ಸು ಮಾಡುತ್ತಿರುವ ಭಾರ್ಗವನಿದ್ದ ಕಡೆಗೆ ಶರ್ಯಾತಿ ಎಂಬ ಮಹಾರಾಜನು ಒಂದು ಸಲ ಬಂದನು. ರಮ್ಯವಾದ ಸರೋವರದಲ್ಲಿ ಸಂತೋಷದಿಂದ ವಿಹರಿಸಬೇಕು ಎಂದು ಅವನ ಅಭಿಲಾಷೆ. ತನ್ನ ನಾಲ್ಕು ಸಾವಿರ ಹೆಣ್ಣುಗಳೊಡನೆ ಬಂದಿದ್ದನು. ಇವನೊಡನೆ ಸುಕನ್ಯೆ ಎಂಬ ಶುಭ್ರಳಾದ ಅವನ ಒಬ್ಬಳೇ ಮಗಳೂ ಅಲ್ಲಿಗೆ ಬಂದಿದ್ದಳು. ಸುತ್ತ ಸಖಿಯರಿರಲು ಮೈ ತುಂಬ ಒಡವೆ ಇಟ್ಟುಕೊಂಡು ಅವರ ನಡುವೆ ಭಾರ್ಗವ ಋಷಿ ತಪಸ್ಸು ಮಾಡುತ್ತಿದ್ದ ಹುತ್ತದೆಡೆಗೆ ಹೋಗಿ ಆಕೆ ತಿರುಗಾಡಿದಳು. ಮನೋಹರವಾದ ಆ ಪ್ರದೇಶದಲ್ಲಿ ಗಿಡ ಮರ ಬಳ್ಳಿಗಳನ್ನು ನೋಡುತ್ತ ಉಲ್ಲಾಸದಿಂದ ತಿರುಗಾಡಿದಳು. ರೂಪ, ವಯಸ್ಸು, ಮದನನ ಮದ ಇವುಗಳಿಂದ ಕೂಡಿದ ಅವಳು ಮೈ ತುಂಬ ಹೂ ಬಿಟ್ಟಿದ್ದ ಕಾಡಿನ ಮರಗಳ ಕೊಂಬೆಗಳನ್ನು ಕೈಗೆ ಸಿಕ್ಕಿದಂತೆ ಮುರಿಯುತ್ತ ಹೋದಳು. ಸ್ವಲ್ಪ ಹೊತ್ತಿನಲ್ಲಿ ಸಖಿಯರನ್ನೆಲ್ಲ ಬಿಟ್ಟು, ಒಂಟಿಯಾಗಿ, ಏಕವಸ್ತ್ರಧಾರಿಯಾಗಿ ಅಲ್ಲಿ ಇಲ್ಲಿ ಸುತ್ತಾಡುತ್ತಿರುವಾಗ ಚರಿಸುವ ಮಿಂಚಿನಂತಿದ್ದ ಆಕೆಯನ್ನು ಭಾರ್ಗವನು ಒಳಗಿಂದಲೇ ಕಂಡನು. ಚೆಲುವೆಯೂ ಕಾಂತಿಯುತಳೂ ಆದ ಆ ಹೆಣ್ಣು ಏಕಾಂತದಲ್ಲಿ ನಲಿಯು

ತ್ತಿರುವುದನ್ನು ಕಂಡು ಕ್ಷಾಮಕಂಠನಾದ ಬ್ರಹ್ಮರ್ಷಿಯು ಮಾತನಾಡಿಸಲು ಪ್ರಯತ್ನಿಸಿದನು. ಅವನ ಧ್ವನಿ ಆಕೆಯ ಕಿವಿಗೆ ಬೀಳಲಿಲ್ಲ. ಹುತ್ತದೊಳಗಿಂದ ಏನೋ ಹೊಳೆದು ಕಾಣಿಸಿತು. ಅದನ್ನು ಕಂಡು ಆಕೆಗೆ ಕುತೂಹಲ ಉಂಟಾಯಿತು. ಮುಳ್ಳೊಂದನ್ನು ತೆಗೆದುಕೊಂಡು ಬುದ್ಧಿಮೋಹದಿಂದ ಇದೇನಿದು ? ಎನ್ನುತ್ತ ಆ ಹೊಳೆವ ಪದಾರ್ಥವನ್ನು ಚುಚ್ಚಿದಳು. ತನ್ನ ಕಣ್ಣನ್ನು ಹೀಗೆ ತಿವಿದುದನ್ನು ನೋಡಿ ಋಷಿಗೆ ಅಧಿಕವಾದ ಕೋಪವುಂಟಾಯಿತು. ಆ ಕೋಪದ ಫಲವಾಗಿ ಶರ್ಯಾತಿಯ ಸೈನ್ಯಕ್ಕೆಲ್ಲ ಮಲ ಮೂತ್ರ ಕಟ್ಟಿಹೋದವು. ಈ ಸಂಕಟ ಸೈನ್ಯಕ್ಕೂ ರಾಜನಿಗೂ ಸಹಿಸಲು ಕಷ್ಟವಾಯಿತು.

ಈ ದುಃಸ್ಥಿತಿಯನ್ನು ಕಂಡು ರಾಜನು ಏನೂ ತೋಚದವನಾಗಿ ಪ್ರಬಲವಾದ ಯಾವದೋ ಕಾರಣವಿಲ್ಲದೆ ಹೀಗಾಗದೆಂದು ಚಿಂತಿಸತೊಡಗಿದನು. ತಪಸ್ವಿಯಾಗಿ ವೃದ್ಧನಾಗಿರುವ ಋಷಿಯ ರೋಷವೇ ಇದಕ್ಕೆ ಕಾರಣವಾಗಿರಬೇಕು ಎಂದೆಣಿಸಿ ಮಹಾತ್ಮರಾದ ಭಾರ್ಗವರಿಗೆ ಯಾರಾದರೂ ಹಿಂಸೆ ಮಾಡಿದಿರಾ ? ತಿಳಿದೋ ಅಜ್ಞಾನದಿಂದಲೋ ನಿಮ್ಮ ಯಾರಿಂದಾಗಲಿ ಋಷಿಗೆ ಅಪಕಾರವಾಗಿದ್ದಲ್ಲಿ ತನಗೆ ನಿಜವನ್ನು ತಿಳಿಸಬೇಕೆಂದು ಎಲ್ಲರನ್ನೂ ಕೇಳಿದನು. ಸೈನಿಕರೆಲ್ಲರೂ ಹೇಳಿದರು – ತಾವು ಯಾವ ಅಪಕಾರವನ್ನೂ ಮಾಡಿ ಅರಿಯೆವು ಎಂದು. ಎಲ್ಲ ರೀತಿಯಲ್ಲಿಯೂ ಪ್ರಯತ್ನಪಟ್ಟು ನಾವು ಇಲ್ಲಿಂದ ಹೊರಟು ಹೋಗುವುದು ಮೇಲು ಎಂದು ರಾಜನಿಗೆ ತಿಳಿಸಿದರು. ಮೃದುವಾದ ಮಾತುಗಳಿಂದ ತನ್ನ ಸ್ನೇಹಿತರನ್ನೂ ಬಂಧು ಬಾಂಧವರನ್ನೂ ವಿಚಾರಿಸಿದನು. ಅವರಲ್ಲಿ ಯಾರಿಗೂ ಏನೂ ತಿಳಿಯದು. ಇತ್ತ ಯಾರಿಗೂ ಆಹಾರವಿಲ್ಲ. ನೆಮ್ಮದಿಯಿಲ್ಲ. ಅಸುಖದಿಂದ ಕಷ್ಟಪಡುತ್ತಿದ್ದಾರೆ. ಇದನ್ನು ನೋಡಿ ತಂದೆ ದುಃಖಿತನಾಗಿದ್ದಾನೆ ಎಂದು ತಿಳಿದ ಸುಕನ್ಯೆ ತಂದೆಯ ಬಳಿಗೆ ಬಂದು ಹೀಗೆ ಹೇಳಿದಳು: 'ನಾನು ಈ ಕಡೆ ಸುತ್ತಾಡುತ್ತಿರುವಾಗ ಅಲ್ಲೊಂದು ಹುತ್ತದಲ್ಲಿ ಬೆಂಕಿಯಂತೆ ಉರಿಯುತ್ತಿರುವ ಯಾವುದೋ ಸತ್ವ ಕಾಣಿಸಿತು. ಅದನ್ನು ಮಿಣುಕುಹುಳುವೆಂದು ಎಣಿಸಿದೆ. ಹತ್ತಿರ ಹೋಗಿ ಅದನ್ನು

ಚುಚ್ಚಿದೆ' ಎಂದಳು. ರಾಜನಿಗೆ ಈಗ ಕಾರಣ ತಿಳಿದಂತಾಯಿತು. ಮಗಳ ಮಾತನ್ನು ಕೇಳಿದವನೇ ಶರ್ಯಾತಿ ಮಹಾರಾಜನು ತ್ವರೆಯಿಂದ ಹುತ್ತದ ಬಳಿಗೆ ಓಡಿಹೋದನು. ಅಲ್ಲಿ ತಪೋವೃದ್ಧನೂ ವಯೋವೃದ್ಧನೂ ಆದ ಭಾರ್ಗವ ಋಷಿ ಇದ್ದುದು ಕಾಣಿಸಿತು. ಮಹಾರಾಜನು ತನ್ನ ಸೈನ್ಯದ ಸುಖಾರ್ಥವಾಗಿ ಕೈ ಮುಗಿದು ಋಷಿಯನ್ನು ಬೇಡಿಕೊಂಡನು. ಅರಿಯದ ಹುಡುಗಿ ಅಜ್ಞಾನದಿಂದ ತಮ್ಮಲ್ಲಿ ಮಾಡಿದ ತಪ್ಪನ್ನು ಕ್ಷಮಿಸಿ ನಮ್ಮನ್ನು ಅನುಗ್ರಹಿಸಬೇಕು ಎಂದನು.

ಋಷಿ – ರೂಪ ಯೌವನಗಳಿಂದ ಕೂಡಿದ ನಿನ್ನ ಮಗಳು ತನ್ನ ಲೋಭ ಮೋಹಗಳ ಬಲದಿಂದ ಅಕಾರ್ಯವನ್ನು ಮಾಡಿದ್ದಾಳೆ. ಆದುದರಿಂದ ಇವಳನ್ನು ನನಗೆ ಮದುವೆ ಮಾಡಿಕೊಟ್ಟರೆ ಇವಳ ಅಕಾರ್ಯವನ್ನು ಕ್ಷಮಿಸುತ್ತೇನೆ. ಈ ಮಾತು ಸತ್ಯವಾದ್ದು.

ಋಷಿಯ ಮಾತನ್ನು ಕೇಳಿ ಶರ್ಯಾತಿ ರಾಜನು ಆಜ್ಞೆಯೆಂದೇ ಅಂಗೀಕರಿಸಿದನು. ಬೇರೆ ಯಾವ ವಿಚಾರವನ್ನೂ ಮಾಡದೆ ಮಹಾತ್ಮನಾದ ಚ್ಯವನನಿಗೆ ತನ್ನ ಮಗಳನ್ನು ಮದುವೆ ಮಾಡಿಕೊಟ್ಟನು. ಸುಕನ್ಯೆಯನ್ನು ಕೊಂಡು ಚ್ಯವನ ಮಹರ್ಷಿ ಪ್ರಸನ್ನನಾದನು. ರಾಜನಿಗೂ ಸೈನ್ಯಕ್ಕೂ ಋಷಿಯ ಪ್ರಸಾದ ದೊರೆತು ಮುಂದೆ ತಮ್ಮೂರಿಗೆ ಪ್ರಯಾಣಮಾಡುವುದು ಸುಲಭವಾಯಿತು.

ಇತ್ತ ತಪಸ್ವಿಯಾದ ಗಂಡನು ದೊರೆತ ಸುಕನ್ಯೆ ಶುಚಿಮನಸ್ಸಿಂದ ಆತನನ್ನು ಆರಾಧಿಸಿದಳು. ಆತನ ಸೇವೆಯಲ್ಲಿ ನಿರತಳಾದಳು. ತಪಸ್ಸಿನಿಂದಲೂ ನಿಯಮದಿಂದಲೂ ಸ್ವಂತ ಪ್ರೀತಿಯಿಂದ ಆತನ ಪರಿಚರ್ಯೆ ಮಾಡಿದಳು. ಯಾವ ಅಸೂಯೆಯೂ ಇಲ್ಲದೆ ಅಗ್ನಿಕಾರ್ಯವನ್ನು, ಅತಿಥಿ ಕಾರ್ಯವನ್ನೂ ಭಕ್ತಿಯಿಂದ ನೆರವೇರಿಸಿದಳು. ಈ ಶುಶ್ರೂಷೆಯಿಂದ ಬಹುಬೇಗ ಚ್ಯವನ ಋಷಿಗೆ ಅವಳ ಪರವಾಗಿ ಮನಸ್ಸಂತೋಷವುಂಟಾಯಿತು.

## ೨

ಹೀಗೆಯೇ ಕೆಲವು ಕಾಲ ಕಳೆಯಿತು. ಒಂದು ದಿನ ಸ್ನಾನ ಮಾಡುತ್ತಿರುವ ಆಕೆಯ ದೇಹ ಸೌಂದರ್ಯ ಅಶ್ವಿನಿದೇವತೆಗಳ ಕಣ್ಣಿಗೆ ಬಿದ್ದಿತು. ಆಕೆಯ ರೂಪೂ ದೇಹಕಾಂತಿಯೂ ಇವಳು ಇಂದ್ರನ ಮಗಳೊ ಎಂಬಂತೆ ಅವರಿಗೆ ನೋಡುವಂತಿತ್ತು. ಈ ದೇವತೆಗಳು ಅವಳ ಬಳಿಗೆ ಬಂದರು. "ಚೆಲುವೆ ನೀನು ಯಾರು? ಕಾಡಿನಲ್ಲಿ ಏನು ಮಾಡುತ್ತಿದ್ದೀಯೆ? ಇದನ್ನು ತಿಳಿಯಬೇಕೆಂದು ನಮಗೆ ಇಚ್ಛೆಯುಂಟಾಗಿದೆ. ನಿಜವನ್ನು ಹೇಳು' ಎಂದರು. ತಾನು ಬಟ್ಟೆಗಳನ್ನು ಉಟ್ಟುಕೊಂಡ ಮೇಲೆ ಆ ಸುರೋತ್ತಮರಿಗೆ ಸುಕನ್ಯೆ ಹೇಳಿದಳು: 'ನಾನು ಶರ್ಯಾತಿ ರಾಜನ ಮಗಳು. ಚ್ಯವನರ ಹೆಂಡತಿ' ಎಂದು. ಅಶ್ವಿನಿ ದೇವತೆಗಳಿಗೆ ಇದನ್ನು ಕೇಳಿ ನಗು ಬಂದಿತು. ಪುನಃ ಅವಳನ್ನು ಕುರಿತು ಹೇಳಿದರು: 'ನಿನ್ನ ತಂದೆ ನಿನ್ನನ್ನು ದಾರಿಯ ಮುದುಕನೊಬ್ಬನಿಗೆ ಕೊಟ್ಟು ಹೋದನು. ಈ ಕಾಡಿನ ಮಧ್ಯದಲ್ಲಿ ವಿದ್ಯುತ್ತಿನ ಮಿಂಚಿನಂತೆ ನೀನು ಹೊಳೆಯುತ್ತಿದ್ದೀಯೆ. ದೇವತೆಯರಲ್ಲಿ ಕೂಡ ನಿನಗೆ ಸಮಾನರಾದ ಯಾರನ್ನೂ ನಾವು ಈವರೆಗೆ ಕಂಡುದಿಲ್ಲ. ಈಗ ನೀನು ಮಲಿನಳಾಗಿದ್ದೀಯೆ. ನಿನ್ನ ರೂಪು ರೇಖೆ ಕುಂದಿವೆ. ಸರ್ವಾಭರಣ ಸಂಪನ್ನಳಾಗಿ ಉತ್ತಮವಾದ ವಸ್ತ್ರಗಳನ್ನು ಧರಿಸಿದೆಯಾದರೆ ನಿನ್ನ ಕಾಂತಿ ಅತಿಶಯವಾಗುವುದು. ಇಷ್ಟಭೋಗಗಳನ್ನು ಬಿಟ್ಟು ಮುಪ್ಪಿನಿಂದ ಸಡಿಲವಾದ ನೈಯುಳ್ಳ ಗಂಡನ ಸೇವೆಯಲ್ಲಿ ಏಕೆ ಹೀಗಾಗಿದ್ದೀಯೆ? ಶುಚಿಯಾದ ನಗೆಯುಳ್ಳ ನಿನ್ನನ್ನು ಇವನು ಕಾಪಾಡಿಯಾನೆ? ಪೋಷಿಸಲು ಶಕ್ತನೆ? ಅಸಮರ್ಥನಾದ ಈ ಚ್ಯವನನನ್ನು ಬಿಡು. ನಮ್ಮಿಬ್ಬರಲ್ಲಿ ಒಬ್ಬನನ್ನು ವರಿಸುವುದು ಒಳ್ಳೆಯದು. ದೇವಕುಲದಲ್ಲಿ ಹುಟ್ಟಿದವಳಂತೆ ನೀನು ಕಾಣುತ್ತಿರುವೆ. ನಿನ್ನ ಯೌವನವನ್ನು ವ್ಯರ್ಥ ಮಾಡಬೇಡ' ಎನ್ನುವರು.

ಹೀಗೆ ನುಡಿದ ಸುರರನ್ನು ಕುರಿತು ಸುಕನ್ಯೆ 'ನನ್ನ ಗಂಡನಾದ ಚ್ಯವನರಲ್ಲಿ ನನಗೆ ಬಹಳವಾದ ಪ್ರೀತಿಯುಂಟು. ನನ್ನ ವಿಷಯದಲ್ಲಿ ಯಾವ

ಕೆಟ್ಟ ಶಂಕೆಯನ್ನೂ ನೀವು ಮಾಡಬೇಡಿ' ಎಂದು ಉತ್ತರ ಕೊಟ್ಟಳು. ಅವರು: 'ನಾವು ದೇವತೆಗಳಿಗೆ ವೈದ್ಯರು. ನಿನ್ನ ಗಂಡನನ್ನು ಪುನಃ ಯುವಕನನ್ನಾಗಿಯೂ ರೂಪಸಂಪನ್ನನಾಗಿಯೂ ಮಾಡುತ್ತೇವೆ. ಆಮೇಲೆ ನಮ್ಮ ಮೂವರಲ್ಲಿ ಯಾರು ಉತ್ತಮನೆಂದು ನಿನಗೆ ತಿಳಿಯುವುದೋ ಆ ಒಬ್ಬನನ್ನು ನಿನ್ನ ಗಂಡನನ್ನಾಗಿ ವರಿಸುವೆಯಂತೆ. ಇದನ್ನು ನಿನ್ನ ಗಂಡನಿಗೆ ತಿಳಿಸು. ಅವನ ಇಷ್ಟವನ್ನು ತಿಳಿದು ಬಾ, ಹೋಗು' ಎನ್ನುವರು. ಸುಕನ್ಯೆ ಗಂಡನ ಬಳಿಗೆ ಬಂದು ದೇವತೆಗಳ ಈ ಮಾತನ್ನು ಅವರು ಹೇಳಿದಂತೆಯೇ ಅರಿಕೆ ಮಾಡಿದಳು ಚ್ಯವನನು ಇದನ್ನು ಕೇಳಿ 'ಆಗಬಹುದು' ಎಂದನು. ಗಂಡನ ಅಪ್ಪಣೆಯನ್ನು ಪಡೆದು ಅವಳು ದೇವತೆಗಳ ಬಳಿಗೆ ಹೋಗಿ "ನೀವು ಹೇಳಿದಂತೆ ಆಗಲಿ ಎಂದು ಹೇಳಿದರು" ಎಂದಳು. ಅಶ್ವಿನಿ ದೇವತೆಗಳು ರಾಜಪುತ್ರಿಯನ್ನು ಕುರಿತು 'ನಿನ್ನ ಗಂಡನು ಬಂದು ಈ ಕೊಳವನ್ನು ಪ್ರವೇಶ ಮಾಡಲಿ' ಎಂದರು. ಚ್ಯವನನಿಗೂ ರೂಪ ಯೌವನಗಳ ಆಸೆ ಇತ್ತು. ಆದುದರಿಂದ ಬೇಗ ಬಂದು ಕೊಳದ ನೀರಲ್ಲಿ ಪ್ರವೇಶ ಮಾಡಿದನು. ಅಶ್ವಿನಿ ದೇವತೆಗಳು ಅವನೊಡನೆ ತಾವೂ ಕೊಳವನ್ನು ಹೊಕ್ಕರು.

ಇನ್ನೊಂದು ಮುಹೂರ್ತದಲ್ಲಿ ಮೂವರೂ ಸರಸ್ಸಿನಿಂದ ಮೇಲಕ್ಕೆ ಎದ್ದು ನಿಂತರು. ಎಲ್ಲರ ರೂಪೂ ದಿವ್ಯವಾಗಿತ್ತು. ಮೂವರೂ ಪರಮ ಯೌವನಶಾಲಿಗಳಾಗಿದ್ದರು. ಹೊಳೆಯುವ ಕುಂಡಲಾದಿ ಆಭರಣಗಳನ್ನು ತೊಟ್ಟಿದ್ದರು. ಸಮಾನವಾದ ರೂಪವನ್ನು ಧರಿಸಿದ ಇವರನ್ನು ಕಂಡು ಆಕೆಯ ಪ್ರೀತಿ ಅಭಿವೃದ್ಧಿಗೊಂಡಿತು. ಮೂವರೂ ಒಂದೇ ಸಲ ಆಕೆಯನ್ನು ಕುರಿತು "ನೀನು ನಮ್ಮಲ್ಲಿ ಯಾರನ್ನು ಬಯಸುವೆಯೋ ಆ ಒಬ್ಬನನ್ನು ಪತಿಯಾಗಿ ವರಿಸು. ಯಾರನ್ನಾದರೂ ವರಿಸಬಹುದು" ಎಂದರು. ಸಮಾನ ವಯೋರೂಪ ಸಂಪನ್ನರಾದ ಆ ಮೂವರನ್ನೂ ಕಂಡು ಮನಸ್ಸಿನಲ್ಲಿ ಯೋಚನೆಮಾಡಿ ನಿಶ್ಚಯಕ್ಕೆ ಬಂದು ತನ್ನ ಗಂಡನನ್ನೇ ಆ ದೇವಿ ಹೊಸದಾಗಿ ಆರಿಸಿಕೊಂಡಳು. ಈಗ ಚ್ಯವನನಿಗೆ ಪುನಃ ತನ್ನ ಭಾರ್ಯೆ ದೊರೆತಳು. ತಾನು ಬಯಸಿದ ವಯಸ್ಸೂ ರೂಪವೂ ದೊರೆತವು. ತುಂಬ

ಹರ್ಷಗೊಂಡವನಾಗಿ ಆ ಅವಳಿ ದೇವತೆಗಳನ್ನು ಕುರಿತು ಈ ಮಾತುಗಳನ್ನು ಹೇಳಿದನು: "ನಿಮ್ಮ ಉಪಕಾರದಿಂದ ನನಗೆ ರೂಪ ಸಂಪತ್ತಿಯೂ ಯೌವನವೂ ಉಂಟಾಗಿವೆ. ಈ ಭಾರ್ಯೆಯೇ ಪುನಃ ದೊರೆತಿದ್ದಾಳೆ. ನಿಮಗೆ ಪ್ರತ್ಯುಪಕಾರ ಮಾಡುತ್ತೇನೆ. ನಿಮಗಿಬ್ಬರಿಗೂ ಪ್ರೀತಿ ಉಂಟಾಗುವಂತೆ ದೇವೇಂದ್ರನೆದುರಿಗೆ ಸೋಮಪಾನ ಮಾಡಿಸುತ್ತೇನೆ." ಇದನ್ನು ಕೇಳಿದ ಅಶ್ವಿನಿ ದೇವತೆಗಳು ಮನಸ್ಸಿನಲ್ಲಿ ಹರ್ಷಗೊಂಡು ಸ್ವರ್ಗಕ್ಕೆ ಹಿಂದಿರುಗಿಹೋದರು. ಚ್ಯವನನೂ ಸುಕನ್ಯೆಯೂ ದೇವತೆಗಳಂತೆ ಸುಖಭೋಗಗಳಲ್ಲಿ ವಿಹರಿಸುತ್ತ ಕಾಲವನ್ನು ಕಳೆದರು.

೩

ಅಳಿಯನಾದ ಚ್ಯವನ ಋಷಿಗೆ ಯೌವನ ಉಂಟಾಯಿತೆಂದು ಶರ್ಯಾತಿ ಮಹಾರಾಜನಿಗೆ ಸುದ್ದಿ ಮುಟ್ಟಿತು. ಮನಸ್ಸಿಗೆ ಸಂತೋಷವಾಯಿತು. ತನ್ನ ಸೇನೆಯೊಡನೆ ಯಾವುದೋ ನೆಪ ಮಾಡಿಕೊಂಡು ಭಾರ್ಗವಾಶ್ರಮಕ್ಕೆ ಬಂದನು. ದೇವಕುಲದಲ್ಲಿ ಹುಟ್ಟಿದಂತೆ ಶೋಭಿಸುತ್ತಿದ್ದ ಚ್ಯವನ ಸುಕನ್ಯೆಯರನ್ನು ನೋಡಿ ಮಹಾರಾಜನಿಗೆ ಎಷ್ಟು ಆನಂದವಾಗಿರಬೇಕು! ಹೊಸದಾಗಿ ಭೂಮಂಡಲವೇ ತನ್ನ ಕೈಗೆ ಬಂದಷ್ಟು ಸಂತೋಷವಾಯಿತಂತೆ! ರಾಜನಿಗೂ ಅವನ ಹೆಂಡತಿಗೂ ತುಂಬ ತೃಪ್ತಿಯಾಗುವಂತೆ ಋಷಿ ಬಂದವರಿಗೆಲ್ಲ ಸತ್ಕಾರ ಮಾಡಿದನು. ಉಪಚಾರಗಳು ನಡೆದು ನೆಮ್ಮದಿಯಲ್ಲಿ ಒಬ್ಬರ ಹತ್ತಿರ ಒಬ್ಬರು ಕುಳಿತು ಮಾತನಾಡುತ್ತ ಇರುವಾಗ ಋಷಿ ಅನೇಕ ಕಥೆಗಳನ್ನು ಹೇಳಿದನು. ಹಾಗೆಯೇ ರಾಜನನ್ನು ಕುರಿತು "ನಿಮ್ಮಿಂದ ಯಜ್ಞವನ್ನು ಮಾಡಿಸುತ್ತೇನೆ. ಅದಕ್ಕೆ ಬೇಕಾದ ಸಂಭಾರಗಳನ್ನು ಸಿದ್ಧಪಡಿಸಿಕೊಳ್ಳಿ" ಎಂದನು. ರಾಜನಿಗೆ ಚ್ಯವನನ ಈ ಮಾತನ್ನು ಕೇಳಿ ಪರಮ ಸಂತೋಷವಾಯಿತು. ಶುಭವಾದ ಒಂದು ದಿನವನ್ನು ನಿಶ್ಚಯಿಸಿದರು. ಯಜ್ಞಕ್ಕೆ ಬೇಕಾದುದೆಲ್ಲ ಸಮೃದ್ಧಿಯಾಗಿ ಒದಗಿ ಬಂತು. ಉತ್ತಮವಾದ ಯಜ್ಞಶಾಲೆಯೊಂದನ್ನು ಮಹಾರಾಜನು ಕಟ್ಟಿಸಿದನು.

ಪ್ರಶಸ್ತವಾದ ಯಜ್ಞಮಂದಿರದಲ್ಲಿ ಚ್ಯವನ ಮಹರ್ಷಿ ರಾಜನಿಂದ ಯಜ್ಞ ಮಾಡಿಸಿದನು. ಆಗ ಅಲ್ಲಿ ಅದ್ಭುತವಾದ ಸಂಗತಿಯೊಂದು ನಡೆಯಿತು. ಅಶ್ವಿನಿಗಳಿಗೆಂದು ಸೋಮ ಪಾತ್ರೆಯನ್ನು ಕೈಯಲ್ಲಿ ಹಿಡಿದು ಚ್ಯವನ ಋಷಿ ಮಂತ್ರಗಳನ್ನು ಉಚ್ಚರಿಸಿ ಅವರನ್ನು ಕರೆದನು. ಅವರು ಅದನ್ನು ತೆಗೆದು ಕೊಳ್ಳದಂತೆ ಇಂದ್ರನು ತಡೆದನು.

ಇಂದ್ರ – ಈ ಇಬ್ಬರೂ ದೇವತೆಗಳಾದರೂ ಸೋಮಾರ್ಹರಲ್ಲ ಎಂದು ನನ್ನ ಮನಸ್ಸಿಗೆ ತೋರುತ್ತಿದೆ. ಇವರು ವೈದ್ಯರು ; ದೇವಪುತ್ರರಿಗೆ ಔಷಧ ಉಪಚಾರದ ಕೆಲಸ ಮಾಡುವವರು. ದೇವತೆಗಳ ಜೊತೆಯಲ್ಲಿ ಸೋಮ ಪಾನ ಮಾಡಲು ಅರ್ಹರಲ್ಲ.

ಚ್ಯವನ – ಇವರು ಮಹಾತ್ಮರು. ರೂಪ ಸಂಪತ್ತಿಯುಳ್ಳವರು. ಇಂಥವರನ್ನು ಅವಮಾನ ಮಾಡಬೇಡ. ಓ ಇಂದ್ರ ! ಇವರು ನನ್ನ ಮುಪ್ಪನ್ನು ಹೋಗಲಾಡಿಸಿದ್ದಾರೆ. ಇತರ ದೇವತೆಗಳಂತೆ ಇವರೂ ದೇವತೆಗಳಲ್ಲವೆ ? ಸೋಮಪಾನಕ್ಕೆ ಇವರು ಅರ್ಹರಲ್ಲವೆಂದು ಹೇಳುವುದು ಸರಿಯಲ್ಲ. ಅಶ್ವಿನಿಗಳು ನಿನ್ನ ಸಮನಾಗಿ ದೇವತೆಗಳೆಂದೇ ನೀನು ಕಾಣ ಬೇಕು.

ಇಂದ್ರ – ಇವರು ಚಿಕಿತ್ಸಕರು, ಕರ್ಮಕರರು. ಇಷ್ಟ ಬಂದ ರೂಪ ವನ್ನು ತಾಳುವವರು. ಮನುಷ್ಯರಂತೆ ಮರ್ತ್ಯಲೋಕದಲ್ಲ ತಿರುಗಾಡುತ್ತಿರು ವವರು. ಇವರಿಗೆ ಯಜ್ಞದಲ್ಲಿ ಸೋಮವನ್ನು ಪಡೆಯುವ ಅರ್ಹತೆ ಹೇಗೆ ಬಂದೀತು ?

ಚ್ಯವನ ಋಷಿಗೆ ಇಂದ್ರನ ಮಾತಿನಲ್ಲಿ ವಿಶ್ವಾಸವುಂಟಾಗಲಿಲ್ಲ. ಅಶ್ವಿನಿ ದೇವತೆಗಳಿಗೆ ಸೋಮಪಾನ ಮಾಡಲು ಋಷಿ ಸೋಮಪಾತ್ರೆಯನ್ನು ಪುನಃ ಕೊಡಲು ಹೋದನು.

ಇದನ್ನು ಕಂಡ ಬಲಾರಿಯಾದ ಇಂದ್ರನು “ ನೀನೇನಾದರೂ ಈ ಸೋಮವನ್ನು ಅವರಿಗೆ ಕುಡಿಯಲು ಕೊಡುವ ಹಟಮಾಡಿದರೆ ನಿನ್ನ ಮೇಲೆ ಘೋರ ರೂಪಿನ ನನ್ನ ವಜ್ರಾಯುಧವನ್ನು ಪ್ರಯೋಗಿಸಿ ಅದರಿಂದ ಪ್ರಹಾರ ಮಾಡುತ್ತೇನೆ ” ಎಂಬು ಹೆದರಿಸಿದನು.

ಭೃಗು ಪುತ್ರನಾದ ಚ್ಯವನನು ಈ ಮಾತುಗಳನ್ನು ಕೇಳಿ ಇಂದ್ರನ ಕಡೆ ಒಂದು ಸಲ ನೋಡಿ ನಕ್ಕನು. ಬಂದು ಪಾನಮಾಡಲು ಹೇಳಿ ಅಶ್ವಿನಿಗಳಿಬ್ಬರಿಗೂ ಸೋಮವನ್ನು ಕೊಟ್ಟನು. ಸರಿ. ಶಚೀಪತಿಯಾದ ಇಂದ್ರನು ಭಯಂಕರವಾದ ತನ್ನ ವಜ್ರಾಯುಧವನ್ನು ಚ್ಯವನನ ಮೇಲೆ ಪ್ರಯೋಗಿಸಿದನು. ಇಂದ್ರನು ವಜ್ರಾಯುಧವನ್ನು ಹಿಡಿದು ತನ್ನನ್ನು ಬಡಿಯಲು ಎತ್ತಿದ ಕೈಯನ್ನು ಚ್ಯವನನು ಸ್ತಂಭಿಸಿದನು. ಎತ್ತಿದ ಕೈ ಅಲುಗದೆ ಹಾಗೆಯೇ ನಿಂತಿತು. ಆ ಬಳಿಕ ಹೂಂಕಾರಮಾಡಿ ಅಗ್ನಿಯಲ್ಲಿ ಮಂತ್ರದೊಡನೆ ಒಂದು ಹೋಮವನ್ನು ಮಾಡಿದನು. ಈ ದೇವತೆಯನ್ನು ಹಿಂಸೆ ಮಾಡಬೇಕೆಂದೇ ಋಷಿ ಈ ಉದ್ಯಮವನ್ನು ಕೈಗೊಂಡದ್ದು. ಋಷಿಯ ತಪೋಬಲ ಹಿರಿದು. ಉರಿಯುವ ಆ ಅಗ್ನಿಯಿಂದ ಮದನೆಂಬ ಹೆಸರಿನ ದೊಡ್ಡ ದೇಹದ ಮಹಾಸುರನೊಬ್ಬನು ಎದ್ದು ಬಂದನು. ಅವನು ಬಹು ವೀರ್ಯಶಾಲಿ. ಅವನ ಶರೀರ ಇಷ್ಟು ಪ್ರಮಾಣದ್ದು ಎಂಬುದನ್ನು ಗೊತ್ತು ಮಾಡಲು ಸುರಾಸುರರಿಗೆ ಅಶಕ್ಯವೆಂಬಂತಿತ್ತು. ಆತನ ನಾಲ್ಕು ಕೋರೆ ಹಲ್ಲು ಬಹು ತೀಕ್ಷ್ಣವಾಗಿ ನೂರು ನೂರು ಯೋಜನ ಚಾಚಿಕೊಂಡಿದ್ದವು. ಉಳಿದ ಹಲ್ಲು ಹತ್ತು ಹತ್ತು ಯೋಜನದವಾಗಿದ್ದವು. ಒಂದು ದವಡೆ ಆಕಾಶದಲ್ಲಿರುವಂತೆಯೂ ಇನ್ನೊಂದು ಭೂಮಿಯಲ್ಲಿಯೂ ಇರುವಂತೆ ಕಾಣುತ್ತಿದ್ದವು. ಅವನ ಆಕಾರ ಉನ್ನತವಾದ ಪ್ರಾಕಾರದಂತೆ ಇತ್ತು. ಶೂಲದ ಮೊನೆಗೆ ಸಮನಾಗಿ ಕಾಣುತ್ತಿತ್ತು. ಅವನ ತೋಳು ಪರ್ವತಗಳಂತಿದ್ದವು. ವಿಸ್ತಾರವಾಗಿ, ದೃಢನಾಗಿ, ಸಮವಾಗಿ ಬಹು ಯೋಜನ ಉದ್ದವುಳ್ಳವಾಗಿ ಇದ್ದವು. ಕಣ್ಣು ಸೂರ್ಯ ಚಂದ್ರರಂತೆ ಉರಿಯುತ್ತಿದ್ದವು. ಮುಖ ಅಂತಕನ ಮುಖದಂತೆ ಕಾಣುತ್ತಿತ್ತು. ವಿದ್ಯುತ್ತಿನಂತೆ ಚಲಿಸುತ್ತಿದ್ದ ಅವನ ನಾಲಿಗೆ ತುಟಿಯ ಎರಡೂ ಕಡೆಗಳನ್ನು ನೆಕ್ಕುತ್ತಿತ್ತು. ಕ್ರೂರವಾದ ಮುಖವುಳ್ಳವನಾಗಿ ಘೋರ ದೃಷ್ಟಿಯಿಂದ ಜಗತ್ತನ್ನೆಲ್ಲ ತನ್ನ ಶಕ್ತಿಯಿಂದ ತಿಂದುಬಿಡುವ ಹಾಗೆ ರಾಕ್ಷಸನು ನೋಡುತ್ತ ಕೋಪಗೊಂಡು ಇಂದ್ರನನ್ನು ತಿನ್ನುವವನಂತೆ ಬೇಗ ಬೇಗ ಅವನ ಬಳಿಗೆ ಬರುತ್ತಿರಲು ಅಸುರನ ಶಬ್ದದಿಂದ ಲೋಕ ತುಂಬಿ ತಲ್ಲಣಿಸಿತು.

## ಸುಕನ್ಯೆ ಚ್ಯವನ

ಈ ಮದಾಸುರನನ್ನು ದೇವರಾಜನಾದ ಇಂದ್ರನು ಜೋಲು ಮುಖ ದಿಂದ ನೋಡಿದನು. ಕೈ ಬಾಯಿ ನಾಲಿಗೆ ಚಾಚಿ ಕಟವಾಯನ್ನು ನೆಕ್ಕುತ್ತ ಮೃತ್ಯು ದೇವತೆಯಂತೆ ತನ್ನನ್ನು ತಿನ್ನಲು ಬರುತ್ತಿದ್ದ ರಾಕ್ಷಸನನ್ನು ಕಂಡು ಅವನಿಗೆ ಭಯವಾಯಿತು. ಮೊದಲೇ ಅವನ ತೋಳು ಚಲಿಸದ ಹಾಗೆ ಆಗಿತ್ತು. ಈಗ ಈ ಮೃತ್ಯು ರೂಪವನ್ನು ಕಂಡು ಅವನು ಭಯ ಪೀಡಿತನಾದನು. "ಓ ಭಾರ್ಗವ, ಇಂದಿನ ದಿನದಿಂದಲೂ ಅಶ್ವಿನಿ ದೇವತೆಗಳು ಸೋಮಾರ್ಹರಾಗಲಿ. ಇನ್ನು ಮುಂದೆ ಇವರಿಗೆ ಸೋಮದಲ್ಲಿ ಭಾಗ ದೊರೆಯಲಿ. ಅದಕ್ಕೆ ನನ್ನ ಅಡ್ಡಿಯಿಲ್ಲ, ಸಮ್ಮತಿಯಿದೆ. ಈ ನನ್ನ ಮಾತು ಸತ್ಯವಾದ್ದು. ನೀನು ಯಾವ ವಿಧಿಗಳನ್ನು ಅನುಸರಿಸಿ ಯಜ್ಞಕಾರ್ಯವನ್ನು ಮಾಡುವೆಯೋ ಅದೆಂದಿಗೂ ಮಿಥ್ಯ ವಾಗದು. ಇವೊತ್ತಿನ ಈ ನಿನ್ನ ಕಾರ್ಯದ ಫಲವಾಗಿ ಇನ್ನು ಮೇಲೆ ಸೋಮಪಾನಕ್ಕೆ ಅಶ್ವಿನಿಗಳು ಅರ್ಹರಾಗಿದ್ದಾರೆ. ನಿನ್ನ ತಪಶ್ಶಕ್ತಿ ಈ ದಿನ ಅವರಿಗೆ ಆ ಯೋಗ್ಯತೆಯನ್ನು ಸಂಪಾದಿಸಿಕೊಟ್ಟಿದೆ. ತನ್ನ ವೀರ್ಯವನ್ನು ಪ್ರಕಾಶಗೊಳಿಸಿಕೊಂಡಿದೆ. ಸುಕನ್ಯೆಯ ತಂದೆಯ ಕೀರ್ತಿಯೂ ಮುಂದಿನ ಕಾಲದಲ್ಲಿ ಲೋಕದಲ್ಲಿ ವಿಸ್ತಾರವಾಗಿ ಹರಡುವುದು. ನೀನು ನನಗೆ ಪ್ರಸನ್ನ ನಾಗು. ನಿನ್ನ ಕಾರ್ಯಗಳು ಎಂದಿಗೂ ವ್ಯರ್ಥವಾಗವು. ನಿನ್ನ ಹಿರಿಮೆ ಲೋಕಕ್ಕೆ ತಿಳಿಯಬೇಕೆಂದೇ ನಾನು ಹೀಗೆ ಮಾಡಿದ್ದು. ನೀನು ಏನೇನು ಬಯಸಿರುವೆಯೋ ಅದೆಲ್ಲ ಹಾಗೆಯೇ ನೆರವೇರಲಿ" ಎಂದು ಇಂದ್ರನು ನುಡಿದುದನ್ನು ಕೇಳಿ ಚ್ಯವನ ಋಷಿಗೆ ಅವನ ಮೇಲೆ ಉಂಟಾಗಿದ್ದ ಕೋಪ ಇಳಿಯಿತು. ಅವನು ಕೃಪೆಗೊಂಡು ಇಂದ್ರನಿಗೆ ಬಿಡುಗಡೆಮಾಡಿದನು. ಮದರಾಕ್ಷಸನನ್ನು ಕುರಿತು "ನೀನು ಇನ್ನು ಮುಂದೆ ಮದ್ಯಪಾನ, ಸ್ತ್ರೀ, ಅಕ್ಷ, ಬೇಟೆ ಇವುಗಳಿರುವಲ್ಲಿ ಹೋಗಿ ಸೇರಿ ವಿಹಾರ ಮಾಡು, ಹೋಗು" ಎಂದು ಅವನನ್ನು ಕಳಿಸಿಕೊಟ್ಟನು. ಇಂದ್ರನಿಗೂ ತೃಪ್ತಿಯಾಗುವಂತೆ ಅಶ್ವಿನಿ ದೇವತೆಗಳೊಡನೆ ಬೇಕಾದಷ್ಟು ಸೋಮವನ್ನು ಪಾನಮಾಡಿಸಿ, ರಾಜನ ಯಾಗವನ್ನು ಪೂರ್ತಿಮಾಡಿದನು. ಸ್ವರ್ಗ ಮುಂತಾದ ಎಲ್ಲ ಲೋಕಗಳಲ್ಲಿಯೂ ಈ ಋಷಿಯ ವೀರ್ಯವೃತ್ತಾಂತ ಹರಡಿ ಪ್ರಖ್ಯಾತಿಗೊಂಡಿತು

ತಾನು ಸುಕನ್ಯೆಯೊಡನೆ ಆಶ್ರಮದಲ್ಲಿ ಸುಖವಾಗಿ ವಿಹರಿಸುತ್ತ ಮುಂದಿನ ಕಾಲವನ್ನು ಕಳೆದನು.

"ನೋಡು, ಯುಧಿಷ್ಠಿರ. ನಿನ್ನೆದುರಿಗೆ ಕಾಣುತ್ತಿರುವ ಈ ಸರೋವರ ಅದೇ. ಸೋದರರೊಡನೆ ನೀನು ಇಲ್ಲಿ ಪಿತೃಗಳಿಗೂ ದೇವತೆಗಳಿಗೂ ತರ್ಪಣಗಳನ್ನು ಕೊಡು" ಎಂದು ಲೋಮಶ ಮಹರ್ಷಿ ಯುಧಿಷ್ಠಿರನಿಗೆ ಸುಕನ್ಯೆ ಚ್ಯವನರ ಕಥೆಯನ್ನು ವರ್ಣಿಸಿದನು.

೪

ಸುಕನ್ಯೆ ಒಬ್ಬ ಮಹಾರಾಜನ ಮಗಳು. ವಯಸ್ಸು ರೂಪ ಎರಡರಲ್ಲಿಯೂ ಅತಿಶಯಳಾದ ಅವಳು ತಂದೆಯ ಜೊತೆಯಲ್ಲಿ ಸರೋವರದ ಬಳಿ ಬಂದು ತನ್ನ ವಯಸ್ಸಿನ ಗೆಳತಿಯರೊಡನೆ ಸುತ್ತಲ ಯಾವುದನ್ನೂ ಲೆಕ್ಕ ಮಾಡದೆ ವಿಹರಿಸುತ್ತಿದ್ದಳು. ಉಳಿದವರೆಲ್ಲ ಬೇರೆ ಬೇರೆ ವಿನೋದಗಳಲ್ಲಿಯೂ ನೀರಾಟದಲ್ಲಿಯೂ ಇರಲು ತಾನೊಬ್ಬಳೇ ಚ್ಯವನ ಋಷಿಯಿದ್ದ ಹುತ್ತದ ಬಳಿ ಹೋದಳು. ದಾರಿಯಲ್ಲಿ ಸ್ವೇಚ್ಛೆಯಾಗಿ ತಿರುಗಾಡಿ ತುಂಬ ಹೂ ಬಿಟ್ಟ ಗಿಡಗಳ ಕೊಂಬೆಗಳನ್ನು ಮುರಿಯುತ್ತ ಯೌವನದ ಒಂದು ಮದದಲ್ಲಿ ತಿರುಗಾಡುತ್ತಿದ್ದುದನ್ನು ಚ್ಯವನನು ಹುತ್ತದೊಳಗಿಂದಲೇ ಕಂಡನು. ಬಹು ದಿನದ ತಪಸ್ಸಿಂದ ಅವನ ದೇಹಶಕ್ತಿ ಕುಂದಿತ್ತು. ಅವನ ಕೊರಳು ತಗ್ಗಿತ್ತು. ಕಣ್ಣಿನ ಕಾಂತಿ ಮಾತ್ರ ಸ್ವಲ್ಪವೂ ಮಂಕಾಗಿರಲಿಲ್ಲ; ಹೊಳೆಯುತ್ತಿತ್ತು. ಅವನ ತಪೋಬಲ ಅಧಿಕವಾಗಿತ್ತಾದರೂ ತುಂಬು ವಯಸ್ಸಿನ ಯುವತಿ ಏಕವಸ್ತ್ರಳಾಗಿ ಕೆಲೆಯುತ್ತ ಹರಿದಾಡುತ್ತಿದ್ದಾಗ ಅವನ ಮನಸ್ಸು ಅವಳ ಕಡೆ ಎಳೆಯಿತು. ಅವಳನ್ನು ಮಾತಾಡಿಸಲು ಪ್ರಯತ್ನಪಟ್ಟು ಧ್ವನಿಶಕ್ತಿ ಸಾಕಾದಷ್ಟು ಇಲ್ಲದ್ದರಿಂದ ಅವನ ಮಾತು ಅವಳಿಗೆ ಕೇಳದಾಗಲು ಋಷಿಗೆ ಅಸಮಾಧಾನವೇ ಆಗಿರಬೇಕು. ಅವಳ ವಿಷಯದಲ್ಲಿ ಒಂದು ಕಡೆ ಆಸೆ, ಇನ್ನೊಂದು ಕಡೆ ಅತೃಪ್ತಿ; ಜೊತೆಗೆ ಅವಳ ಚಪಲವೂ ಚೇಷ್ಟೆಯೂ ಅವನನ್ನು ಕೆರಳಿಸಿದವು. ಹುತ್ತದಲ್ಲಿ ಏನಿದೆಯೊ ಎಂದು ಹುಡುಗಿ

ಯೋಚಿಸಬೇಡವೆ? ಯಾವುದೇ ಇರಲಿ, ಅದು ಜೀವಂತ ವಸ್ತುವಲ್ಲವೆ? ಮುಳ್ಳು ತೆಗೆದುಕೊಂಡು ಅಂಥದನ್ನು ಚುಚ್ಚುವುದೆ? ವಯಸ್ಸಿನ ಮದದಲ್ಲಿ ಅವಳು ಮಾಡುತ್ತಿದ್ದ ಹಿಂಸೆಯೂ ಆಪುತ್ತಿದ್ದ ಚೆಲ್ಲಾಟವೂ ಅವನ ಅಸಮಾಧಾನವನ್ನು ಕ್ರೋಧವನ್ನಾಗಿ ಮಾಡುವುವು. ಈ ಅಕಾರ್ಯದ ಫಲವಾಗಿ ತನ್ನ ಜನಕ್ಕೆಲ್ಲ ಬೇನೆಯುಂಟಾಯಿತು.

ಮಗಳು ಮಾಡಿದ ಈ ಕೀಟಲೆ, ಈ ಹಿಂಸೆಯಿಂದ ತನ್ನ ಸೈನ್ಯಕ್ಕೂ ಪರಿವಾರಕ್ಕೂ ಕಷ್ಟ ಉಂಟಾದ್ದನ್ನು ರಾಜನು ನೋಡಿದನು. ಅವರನ್ನೆಲ್ಲ ಅದರಿಂದ ಬಿಡುಗಡೆ ಮಾಡಿದ ಹೊರತು ಯಾವ ನೆಮ್ಮದಿಯೂ ಇಲ್ಲವಾಯಿತು. ಇತರರ ಯಾವ ಅಪರಾಧವೂ ಇದಕ್ಕೆ ಕಾರಣವಲ್ಲ. ಮತ್ತೇನು ನಡೆದಿರಬಹುದು ಎಂದು ಎಲ್ಲರೂ ಕಣ್ಣು ಕಣ್ಣು ಬಿಡುತ್ತ, ದಿಕ್ಕೆಟ್ಟಿರುವಾಗ ರಾಜಪುತ್ರಿಯೇ ತಂದೆಯ ಬಳಿಗೆ ಹೋಗಿ ತಾನು ಮಾಡಿದ್ದನ್ನು ತಿಳಿಸಬೇಕಾಯಿತು. ತಪ್ಪು ಗುರುತರವಾದುದು. ಋಷಿ ಸಾಮಾನ್ಯನಲ್ಲ. ಅವನ ಕೋಪದಿಂದ ಸುಲಭವಾಗಿ ಪಾರಾಗುವುದು ಶಕ್ಯವಿಲ್ಲ. ಅವನಲ್ಲದೆ ಇನ್ನಾರೂ ಗತಿಯಿಲ್ಲ – ಎಂದು ರಾಜನು ಅವಳ ಪರವಾಗಿ ಋಷಿಗೆ ಶರಣಾದನು. ಇಲ್ಲಿ ರಾಜನದೇನೂ ತಪ್ಪಿಲ್ಲ. ತಪ್ಪು ಮಾಡಿದವರು ಶಿಕ್ಷೆಗೆ ಒಳಗಾಗುವುದು ತಾನೇ ಸರಿ? ಆದುದರಿಂದ ಚ್ಯವನ ಋಷಿ ಅವಳಿಗೆ ಶಿಕ್ಷೆಯನ್ನು ವಿಧಿಸಿದನು: ರಾಜಪುತ್ರಿ ತನ್ನ ಸೊಕ್ಕಿಗಾಗಿ ಋಷಿಪತ್ನಿಯಾಗಬೇಕೆಂದು. ರಾಜನು ಒಪ್ಪಬೇಕಾಯಿತು. ಸದ್ಯಃ ಋಷಿಯ ಕೋಪ ತಪ್ಪಿದರೆ ಸಾಕು, ಆದರಿದ ಜೇನೆ ಇಳಿದರೆ ಸಾಕು ಎಂಬ ಸ್ಥಿತಿಯಲ್ಲಿದ್ದ ಅವನಿಗೆ ಯಾವ ದಂಡವನ್ನಾದರೂ ತೆತ್ತು ಅಲ್ಲಿಂದ ಸುಸೂತ್ರವಾಗಿ ತಪ್ಪಿಸಿಕೊಂಡೆ, ಬದುಕಿದೆ ಎನ್ನಿಸಿರಬೇಕು. ಮಗಳ ಇಷ್ಟವನ್ನು ಕೇಳಲಿಲ್ಲ. ಅವಳನ್ನು ಋಷಿಗೆ ಕೊಟ್ಟದ್ದೇ ಕೊಟ್ಟದ್ದು.

ಅತ್ತ ಋಷಿಯ ನಡತೆಯೂ ವಿಚಿತ್ರವಾದದ್ದೇ. ಅವನು ಋಷಿ. ಅವನ ತಪೋಬಲ ಅತಿಶಯುವಾದ್ದು. ಇತರರು ಅಪಚಾರ ಮಾಡಿದಾಗ ಅದಕ್ಕೆ ಕಾರಣರಾದವರನ್ನು ದಂಡಿಸುವುದೂ ಸಹಜವೇ, ನ್ಯಾಯವೇ. ಆದರೆ ಸಾಮಾನ್ಯ ತಪಸ್ವಿಗಳು ವಿಧಿಸುವ ಶಿಕ್ಷೆಗೂ

ಅವನು ವಿಧಿಸಿದ್ದಕ್ಕೂ ವಿಶೇಷ ವ್ಯತ್ಯಾಸವಿದೆ. ಇಳಿವಯಸ್ಸಿನವನಾದ ಅವನು ಚೆಲುವೆಯಾದ ಈ ಯುವತಿ ಕನ್ಯೆಯ ಮೇಲೆ ಆ ಮೊದಲೆ ಮೋಹಗೊಂಡಿದ್ದವನಲ್ಲವೆ! ಅವಳನ್ನು ತನಗೆ ಮದುವೆ ಮಾಡಿಕೊಟ್ಟರೆ ತನ್ನ ಕೋಪ ಇಳಿಯುವುದೆಂದನು. ತಾನು ಬರಿಸಿದ ಬೇನೆಯಿಂದ ರಾಜನ ಸೈನ್ಯವನ್ನು ಪಾರುಮಾಡುವುದಕ್ಕೆ ಅದೊಂದೇ ಉಪಾಯವೆಂದು ಹೇಳಿದನು. ಋಷಿಗೂ ರಾಜಕುಮಾರಿಗೂ ವಧೂವರ ಸಾಮ್ಯ ಹೊಂದುತ್ತದೆಯೋ ಇಲ್ಲವೋ ಆ ವಿಚಾರ ಕಥೆಯಲ್ಲಿ ಲೆಕ್ಕಕ್ಕೆ ಬರುವುದಿಲ್ಲ. ಆ ಸ್ಥಿತಿಯಲ್ಲಿ ಕೇಳಬೇಕು ಯಾರು? ಋಷಿ ಇಂಥ ಶಿಕ್ಷೆಯನ್ನು ವಿಧಿಸುವುದೂ ಅಪರೂಪವೇ. ಅಂತೂ ಒಂದೇ ಏಟಿಗೆ ಋಷಿಯ ಕೋಪ ಹಿಂಗಿತು; ಬಯಸಿದ ಕನ್ಯೆ ಅವನಿಗೆ ದೊರೆತಳು; ಎರಗಿದ ಕಷ್ಟದಿಂದ ರಾಜನೂ ಪರಿವಾರವೂ ಉದ್ಧಾರವಾಗಿ ಅಲ್ಲಿಂದ ಸುಖವಾಗಿ ಹೋಗುವುದು ಶಕ್ಯವಾಯಿತು.

ಒಳ್ಳೆಯ ಕುಲದಲ್ಲಿ ಹುಟ್ಟಿ ಬೆಳೆದ ಸುಕನ್ಯೆ ಒಳ್ಳೆಯ ಮಗಳು. ಆದ್ದರಿಂದ ಅವಳಿಗೆ ತಾನು ಸೊಕ್ಕಿದುದು ಸರಿಯಲ್ಲವೆಂದು ಗೊತ್ತಾಗಿರ ಬೇಕು. ಮಿಣುಕುಹುಳುವಾದರೆ ತಾನೆ ಏನು? ಜೀವಂತ ಪ್ರಾಣಿಯನ್ನು ಹಿಂಸೆ ಮಾಡಬಾರದು ಎಂಬುದು ಅವಳಿಗೆ ತಿಳಿಯಬೇಕಿತ್ತು. 'ಮೀಸೆ ಬಂದವನು ದೇಶ ಕಾಣ' ಎಂಬುದು ಒಂದು ಕನ್ನಡ ಗಾದೆ. ರೂಪ ಯೌವನಗಳುಳ್ಳ ರೂಪವತಿಯರು ಮದಿಸುವುದು ಅಚ್ಚರಿಯೇನೂ ಇಲ್ಲ. ಹೊಳೆವ ಪದಾರ್ಥ ಹುಳುವಲ್ಲ; ಮಹಾ ತಪಸ್ವಿಯಾದ ಚ್ಯವನ ಋಷಿಯ ಕಣ್ಣು; ಅದನ್ನು ತಾನು ಮುಳ್ಳಿಂದ ಚುಚ್ಚಿದುದು ಸರ್ವಥಾ ಸರಿಯಲ್ಲ; ಅದಕ್ಕೆ ಋಷಿ ಕೋಪಿಸಿಕೊಂಡು ತನ್ನ ತಂದೆಯ ಕಡೆಯವರಿಗೆ ಈ ಗಾಸಿ ತಂದದ್ದು ಸರಿಯೆಂದು ತೋರಿರಬೇಕು. ಈ ನಡುವೆ ಋಷಿ ತನ್ನನ್ನು ಮಾತನಾಡಿಸಲು ಯತ್ನಿಸಿದುದು ಮಾತ್ರ ತನಗಾಗಲಿ ಉಳಿದ ಯಾರಿಗಾಗಲಿ ಗೊತ್ತಿಲ್ಲ. ನಮಗೆ ಮಾತ್ರ ತಿಳಿದ ಸಂಗತಿ.

ಯಾವಾಗ ತಂದೆ ಅವಳನ್ನು ಋಷಿಯ ಕೈಗೆ ಕೊಡುವುದು ಅನಿವಾರ್ಯ ವಾಯಿತೊ ರೂಪ ಯೌವನಮತ್ತಳಾದ ಆ ರಾಜಪುತ್ರಿ ಒಂದೇ ಒಂದು

ಗಳಿಗೆ ಕೂಡ ನಡೆದ ಸಂಗತಿ ಅನ್ಯಾಯವೆಂದಾಗಲಿ ತನಗೆ ಅದರಿಂದ ಕಷ್ಟವೆಂದಾಗಲಿ ನುಡಿಯಲಿಲ್ಲ; ಮುಖದಲ್ಲಿ, ನಡತೆಯಲ್ಲಿ ತೋರಿಸಲಿಲ್ಲ. ತಪ್ಪು ಮಾಡಿದವಳು ಅದರ ಫಲಾಫಲಗಳಿಗೆ ಪೂರ್ತಿ ಹೊಣೆಗಾರಳು. ನಿರ್ಬಂಧಕ್ಕೆ ಸಿಕ್ಕಿ ತಾನು ಋಷಿಯ ಒಡವೆಯಾಗಬೇಕಾಗಿ ಬಂದಿತೆಂದು ಆಕ್ರೋಶ ಪಡಲಿಲ್ಲ. ಎಲ್ಲರಂತೆ ಸಾಧಾರಣವಾಗಿ ಮದುವೆಯಾದ ಗಂಡನಲ್ಲಿ ಯಾವ ರೀತಿ ನಡೆದುಕೊಳ್ಳಬೇಕೊ ಆರೀತಿ ಚ್ಯವನನಲ್ಲಿ ನಡೆದುಕೊಂಡಳು. ಋಷಿಕಾರ್ಯಗಳಲ್ಲಿ ಬೇಸರವಿಲ್ಲದೆ ಪರಿಚರ್ಯೆ ಮಾಡಿದಳು. ಗಂಡನು ಮುದುಕನೆಂದು ಕೊರಗದೆ ಸೇವಿಸಿದಳು. ಅವನನ್ನು ತುಷ್ಟಿಪಡಿಸಿದಳು. ಕಥೆ ಇಲ್ಲಿಗೆ ಮುಗಿಯಬಹುದಿತ್ತು. ಇದನ್ನು ಬರೆದ ಕಥೆಗಾರನಿಗೆ ಇದನ್ನು ಇಲ್ಲಿಗೆ ನಿಲ್ಲಿಸುವುದಕ್ಕೆ ಇಷ್ಟವಿಲ್ಲ. ನಿಜವಾದ ಪ್ರೀತಿಯ ಹದದಲ್ಲಿಯೂ ತೃಪ್ತಿಯಲ್ಲಿಯೂ ಈ ಇಬ್ಬರ ಮನಸ್ಸೂ ಅನ್ಯೋನ್ಯವಾಗಿ ಬೆಳೆದವೆ? ಬೆರೆದವೆ? ಎಂಬುದನ್ನು ಬಹುಶಃ ತೋರಿಸಬೇಕೆಂಬುದು ಅವನ ಇಚ್ಛೆ ಯಾಗಿರಬೇಕು. ಆದ್ದರಿಂದಲೇ ಅಶ್ವಿನಿ ದೇವತೆಗಳ ಪ್ರಸಂಗವನ್ನು ಅವನು ತಂದದ್ದು.

ಅಶ್ವಿನಿ ದೇವತೆಗಳು ಚೆಲುವರು ಈ ಅವಳಿ ಗಂಡುಗಳು ದೇವ ಲೋಕದ ಇತರ ಎಲ್ಲರಿಗಿಂತಲೂ ರೂಪವಂತರು. ದೇವಲೋಕದಲ್ಲಿಯೇ ಸುಕನ್ಯೆಯಂಥ ಚೆಲುವೆ ಇಲ್ಲವೆಂದು ಇಂಥವರು ಅವಳಿಗೆ ಆಸೆ ಪಟ್ಟರೆಂದ ಮೇಲೆ ಮನುಷ್ಯನಾದ ಚ್ಯವನ ಋಷಿ ಆಕೆಯ ಚೆಲುವಿಗೆ ಸೋತುದು ಹೆಚ್ಚಲ್ಲ. ಇತ್ತ ದೇವತೆಗಳಾದರೆ ತಾನೆ ಏನು? ಹೆಂಗಸೊಬ್ಬಳು ಏಕಾಂತ ದಲ್ಲಿ ಸ್ನಾನಮಾಡುತ್ತಿದ್ದರೆ ಆ ಸ್ಥಿತಿಯಲ್ಲಿ ಅವಳನ್ನು ನೋಡುವುದು ತರವಲ್ಲ. ನೋಡಿದರು. ಎಲ್ಲಿಯೋ ಸುತ್ತಾಡುತ್ತಿದ್ದ ಅವರ ಕಣ್ಣಿಗೆ ಈ ಚೆಲುವೆ ಬಿದ್ದಿರಬೇಕೆಂದುಕೊಳ್ಳೋಣ. ಅವರ ಮನಸ್ಸು ಆ ಚೆಲುವಿಗೆ ಸೆರೆಯಾ ಯಿತು; ಸೂರೆ ಹೋಯಿತು. ಅವರು ಅವಳನ್ನು ಬೇಡಿದರು. ನನ್ನನ್ನೇ ವರಿಸೆಂದು ಒಬ್ಬೊಬ್ಬರೂ ಹಟ ಹಿಡಿಯದೆ. ತಾವೇ ಜಗಳವಾಡದೆ, ತಮ್ಮಲ್ಲಿ ಒಬ್ಬರನ್ನು ಮದುವೆಯಾಗು, ಮುದಿ ಗಂಡನೊಡನೆ ಸಂಸಾರ ಮಾಡಿ ನಿನ್ನ ಯೌವನವನ್ನೂ ರೂಪ ಸಂಪತ್ತನ್ನೂ ಏಕೆ ವ್ಯರ್ಥಮಾಡಿಕೊಳ್ಳುತ್ತಿರುವೆ

ಎಂದು ಚಾಟೂಕ್ತಿ ನುಡಿದರು. ಈ ಶೃಂಗಾರ ಪ್ರಸಂಗ ಕಟ್ಟುಕಥೆಗಳಲ್ಲಿ ರೋಮಾಂಚಕಾರಿಯಾಗುವ ಸಂದರ್ಭ. ಇಂಥದು ನಡೆಯುತ್ತದೆ. ಹಿಂದೆ ರಾವಣನು ಸೀತೆಯನ್ನು ಬೇಡಿದುದು ಹೀಗೆ. ಇಂದ್ರನು ಅಹಲ್ಯೆಯನ್ನು ಮೋಹಿಸಿ ದಾರಿ ತಪ್ಪಿಸಿದುದೂ ಹೀಗೆಯೇ. ಮಹಾಶ್ವೇತೆಗೆ ಮೋಹ ಗೊಂಡು ಎರಡನೆಯ ಜನ್ಮದಲ್ಲಿ ಪುಂಡರೀಕ-ವೈಶಂಪಾಯನನು ನುಡಿದುದೂ ಇದನ್ನೇ. ಸುಕನ್ಯೆಗೆ ಪೇಚಾಟಕ್ಕೆ ಇಟ್ಟುಕೊಂಡಿರಬೇಕು. ಆಕೆ ಮಡಿಯುಟ್ಟು ಅವರೆದುರಿಗೆ ನಿಂತು ಸಾಧ್ವಿಯಾದ ಸತಿಯೊಬ್ಬಳು ಕೊಡುವ ಉತ್ತರ ವನ್ನು ಅವರಿಗೆ ಕೊಟ್ಟಳು. ಅವರ ಮೇಲೆ ಕೋಪಗೊಂಡು ಶಾಪ ವನ್ನು ಕೊಡಬಹುದಾಗಿತ್ತು. ಅಥವಾ ಅನಸೂಯೆಯಂತೆ ಅವರ ದರ್ಪ ವನ್ನು ಮುರಿಯಬಹುದಾಗಿತ್ತು. ಗಂಡನಿಗೆ ಹೇಳಿ ತಕ್ಕ ಶಾಸ್ತಿ ಮಾಡಿಸ ಬಹುದಾಗಿತ್ತು. ಹಾಗೆ ಮಾಡಲಿಲ್ಲ. ತಾನು ತನ್ನ ಗಂಡನಲ್ಲಿ ಬಹು ಪ್ರೀತಿಯುಳ್ಳವಳು, ತನ್ನ ವಿಷಯದಲ್ಲಿ ಸಂಶಯ ಪಡಬೇಡಿ, ದೇವತೆಗಳು ತನ್ನನ್ನು ಕೀಳಾಗಿ ಭಾವಿಸಬಾರದು ಎಂಬಂತೆ ಮೃದುಮಾತಿನಲ್ಲಿಯೇ ಉತ್ತರ ಕೊಟ್ಟು ಅವರನ್ನು ನಿವಾರಿಸಿದಳು.

ದೇವತೆಗಳು ಬೇರೊಂದು ರೀತಿ ಯತ್ನಮಾಡಿದರೆ ತಮ್ಮ ಇಷ್ಟಾರ್ಥ ನೆರವೇರಿತೇನೊ ನೋಡೋಣವೆಂದು ಯತ್ನಿಸಿ ಎರಡನೆಯ ಉಪಾಯ ಹೂಡಿ ದರು. ಇದು ವೈದ್ಯರಾದ ಅವರ ಶಕ್ತಿಯನ್ನು ಪ್ರಯೋಗಿಸುವ ಪ್ರಸಂಗ. ಒಳ ಬಯಕೆಯನ್ನು ಮಾತ್ರ ಇನ್ನೂ ಬಿಡಲಿಲ್ಲ; ಇವಳನ್ನು ಬಲಾತ್ಕರಿಸ ಲಿಲ್ಲ. ಋಷಿಯನ್ನು ಅಗಡು ಮಾಡಿಕೊಳ್ಳಲಿಲ್ಲ. ತಮ್ಮ ವೈದ್ಯಶಕ್ತಿಯಿಂದ ಮುದುಕರನ್ನು ಯುವಕರನ್ನಾಗಿಯೂ ರೂಪವಂತರನ್ನಾಗಿಯೂ ಮಾಡುವ ನಿಪುಣತೆ ತಮಗಿರುವುದರಿಂದ ನಿನ್ನ ಗಂಡನನ್ನು ರೂಪಾಂತರಗೊಳಿಸುತ್ತೇವೆ. ಆಮೇಲೆ ನಮ್ಮ ಮೂವರಲ್ಲಿ ನಿನ್ನ ಇಚ್ಛೆಯಿದ್ದವರನ್ನು ವರಿಸುವೆಯಂತೆ ಎಂದು ಹೇಳಿ ಇದಕ್ಕೆ ಚ್ಯವನ ಋಷಿಯ ಒಡಂಬಡಿಕೆಯನ್ನು ತಿಳಿದು ಬಾರೆಂದು ಅವಕಾಶ ಕೊಟ್ಟರು. ಈ ಮಾತಿಗೆ ಸುಕನ್ಯೆ ಹೇಗೆ ಒಪ್ಪಿದಳೋ ಕವಿ ಹೇಳಿಲ್ಲ. ಸದ್ಯಃ ಇಲ್ಲಿಂದ ಮನೆಗೆ ಹೋದರೆ ಸಾಕೆಂದು ಆಕೆ ಒಪ್ಪಿರ ಬೇಕು. ನಡೆದ ಸಂಗತಿಯನ್ನು ಗಂಡನಿಗೆ ಹೇಗೂ ತಿಳಿಸಬೇಕು. ಒಂದು

ಕಡೆ ಗರತಿಯಾದ ಹೆಂಡತಿಯ ಧರ್ಮ ಅದು. ಎರಡನೆಯದು ದೇವತೆಗಳ ಮಾತಿಂದ ಗಂಡನಿಗೆ ಪ್ರಯೋಜನ ಆಗುವುದಾದರೆ ಏಕಾಗಬಾರದು ಎಂದೂ ಆಕೆ ಯೋಚಿಸಿರಬಹುದು.

ನಡೆದುದನ್ನು ಕೇಳಿ ಚ್ಯವನನಿಗೂ ಕೋಪ ಬರಲಿಲ್ಲ. ಋಷಿಪತ್ನಿಯಾದ ಸುಕನ್ಯೆಯ ವಿಷಯದಲ್ಲಿ ತನ್ನಂಥ ತಪಸ್ವಿಗೆ ಅಪಮಾನಕರವಾದ ರೀತಿ ಅಶ್ವಿನಿ ದೇವತೆಗಳು ನಡೆದರೆಂದು ಅವನು ಅವರನ್ನು ನಿಗ್ರಹಿಸಬಹುದಾಗಿತ್ತು. ಅವರ ಮೇಲೆ ಸ್ವಲ್ಪವಾದರೂ ಅಸಮಾಧಾನ ಉಂಟಾಯಿತೆಂಬಂತೆ ವರ್ಣನೆಯಿಲ್ಲ. ಹೆಂಡತಿಯ ಮಾತನ್ನು ಕೇಳಿದ ಕೂಡಲೆ 'ಕ್ರಿಯತಾಂ' ಎಂಬ ಒಂದೇ ಮಾತಿನ ಉತ್ತರವನ್ನು ಕೊಡುತ್ತಾನೆ. ಅವನ ಮನಸ್ಸಿನಲ್ಲಿ ಆ ಸಮಯದಲ್ಲಿ ಏನೇನಾಗಿರಬಹುದೆಂಬುದನ್ನು ನಾವೇ ಊಹಿಸಿಕೊಳ್ಳಬೇಕು. ತನಗೆ ವೃದ್ಧಾಪ್ಯ ಹೋಗಿ ಯೌವನವೂ ಚೆಲುವೂ ಬರುವುದಾದರೆ ಸಂತೋಷವೇ ಅಲ್ಲವೆ? ಚಿಕ್ಕ ವಯಸ್ಸಿನ ಮಡದಿಯಲ್ಲಿ ಹೆಚ್ಚು ಸಮತೆಯಿಂದ ಬದುಕನ್ನು ನಡಸುವುದು ಆಗ ಶಕ್ಯವಾಗುತ್ತದೆ. ಆಕೆಯ ಪ್ರೀತಿ ತೆರವು ತನಗೆ ದೊರೆಯುವಂತಾದರೆ ನಿಜವಾಗಿಯೂ ತಾನು ಕೃತಕೃತ್ಯನೆಂದೇ ಅವನು ಭಾವಿಸಿರಬೇಕು. ಜೊತೆಗೆ, – ದೇವತೆಗಳ ಕಣ್ಣು ಬಿದ್ದ ಹೆಣ್ಣು ತನ್ನ ಹೆಂಡತಿ. ಸುಲಭವಾಗಿ ಅವರಲ್ಲಿ ಯಾರನ್ನಾದರೂ ಅವಳು ಒಪ್ಪಿ ಅವರೊಡನೆ ಹೋಗಲು ಶಕ್ಯವಿದ್ದಿತು. ಇಂಥ ಅವಕಾಶವಿರುವಾಗ ಮುದುಕನೂ ತಪಸ್ವಿಯೂ ಆದ ತನ್ನೊಡನೆಯೇ ಇರು ಎಂದು ಅವಳಿಗೆ ಕಟ್ಟಾಜ್ಞೆಮಾಡಿ ತನಗೆಯೇ ಅವಳನ್ನು ಉಳಿಸಿಕೊಳ್ಳಬಹುದೆ? ಅಥವಾ ಅವಳ ಮನಸ್ಸನ್ನು ಇನ್ನಷ್ಟು ವಿಶದವಾಗಿ ತಿಳಿದುಕೊಳ್ಳುವ ಅವಕಾಶವೂ ಇದಾಗುತ್ತದೆಂದು ಎಣಿಸಿದನೋ! ಎಷ್ಟಾದರೂ ಸಿಕ್ಕಿನ ಬಲಾತ್ಕಾರದಲ್ಲಿ ತನಗೆ ಹೆಂಡತಿಯಾದವಳು ಅವಳು. ತನಗೆ ತುಷ್ಟಿ ಬರುವಂತೆ ಈವರೆಗೂ ಸೇವೆಯನ್ನು ಮಾಡಿದ್ದಾಳೆ. ಅವಳಿಗೆ ತನ್ನಿಂದ ಬಿಡುಗಡೆಯಾಗಬೇಕೆಂಬ ಅಭಿಲಾಷೆ ಒಳಗೆ ಇದ್ದರೆ ಏಕಾಗಬಾರದು, ಎಂಬ ಔದಾರ್ಯವೂ, ಮಾನವತೆಯೂ ಅವನಲ್ಲಿ ಏಕೆ ಉಂಟಾಗಿರಬಾರದು? ಇಷ್ಟೆಲ್ಲ ಮಾತಿಗೂ ಗೋಜಿಗೂ ತನ್ನ ಮನೆಯ ಮಾತನ್ನು ತಂದ

ಹೆಂಡತಿಗೂ, ಅಶ್ವಿನಿ ದೇವತೆಗಳಿಗೂ ತನ್ನ ತಪೋಬಲದಿಂದ ತಕ್ಕ ಶಾಸ್ತಿ ಮಾಡಬಹುದಾಗಿತ್ತು. ಆದರೆ ಹೆಂಡತಿಯ ಒಲವಿನ ವಿಷಯದಲ್ಲಿ ಅವನಿಗೆ ಬಹುಶಃ ಯಾವ ಸಂದೇಹವೂ ಇರಲಿಲ್ಲವೆಂದು ಕಾಣುತ್ತದೆ. ದೇವತೆಗಳ ಚಿಕಿತ್ಸೆಯಿಂದ ತನಗೆ ರೂಪ ಯೌವನ ಬಂದರೆ ಯೋಗ, ಕ್ಷೇಮ ಎರಡೂ ಒಂದೇ ವ್ಯವಹಾರದಿಂದ ಸಾಧಿತವಾಗಿ ಲಾಭವಾಗುವುದೆಂದು ಅವನ ಮನಸ್ಸಿನಲ್ಲಿ ಕಂಡಿರಬೇಕು. ಆದುದರಿಂದ ಒಪ್ಪಿದನೆನ್ನಿಸುತ್ತದೆ.

ದೇವತೆಗಳು ಹೇಳಿದ ಕೂಡಲೆ ಸರೋವರದ ಬಳಿಗೆ ಹೋಗಿ ದೇವತೆಗಳು ಹೇಳಿದಂತೆ ಅದರೊಳಗೆ ಮುಳುಗಿದನು. ಉತ್ತರಕ್ಷಣದಲ್ಲಿ ತನ್ನೊಡನೆ ಆ ಇಬ್ಬರು, ಒಟ್ಟು ಮೂವರು, ತನ್ನ ಹೆಂಡತಿಯ ಎದುರು ನಿಂತುದಾಯಿತು. ಅವಳ ಮನಸ್ಸಿನ ಪ್ರಸಾದವನ್ನು ಮೂವರೂ ಒಟ್ಟಿಗೆ ಬೇಡುವರು. ಸುಕನ್ಯೆ ಚ್ಯವನನನ್ನು ಮೊದಲು ಕೋರಿ ಮದುವೆಯಾಗಲಿಲ್ಲ. ಅದು ನಿರ್ಬಂಧದ ಮದುವೆ. ನಿಜವಾಗಿ ಈಗ ನಡೆದ ಇದು ಸುಕನ್ಯಾ ಸ್ವಯಂವರ. ಈ ಸ್ವಯಂವರಕ್ಕೆ ಅವಕಾಶ ಕೊಟ್ಟದ್ದು ಅಶ್ವಿನಿ ದೇವತೆಗಳ ಬಯಕೆ; ಚ್ಯವನನ ಹಿರಿಮೆ. ಈಗ ಸುಕನ್ಯೆ ಸ್ವತಂತ್ರಳು. ಎಲ್ಲರೂ ಸೇರಿ ಮಾಡಿಕೊಂಡ ಒಪ್ಪಂದದ ಮೇರೆಗೆ ಮೂವರಲ್ಲಿ ಯಾರನ್ನಾದರೂ ಅವಳು ಹೊಸದಾಗಿ ವರಿಸಬಹುದಾಗಿತ್ತು. ಅವರಲ್ಲಿ ಒಬ್ಬರನ್ನು ವರಿಸಿದ್ದರೆ ಇನ್ನಿಬ್ಬರಿಗೆ ಅಸಮಾಧಾನವಿರುತ್ತಿರಲಿಲ್ಲ. ಇಂಥಾದ್ದರಲ್ಲಿ 'ದೇವೀ ವವ್ರೇ ಸ್ವಕಂ ಪತಿಮ್' – ಆಕೆ ಚ್ಯವನನನ್ನೇ ಪುನಃ ಪತಿಯನ್ನಾಗಿ ವರಿಸಿದಳು – ಎಂದು ವರ್ಣನೆ ಇದೆ. ಇದು ಸರ್ವಥಾ ಗುಣ ಪರೀಕ್ಷೆ; ಪ್ರೇಮದ ಪರೀಕ್ಷೆ. ತಾವು ಉಪಕಾರ ಮಾಡಿದ್ದಾಗ ಸುಕನ್ಯೆ ತಮ್ಮಲ್ಲಿ ಒಬ್ಬರನ್ನು ಒಪ್ಪಿಯಾಳು ಎಂಬ ಆಸೆ ಅಶ್ವಿನಿ ದೇವತೆಗಳಿಗೆ ಇದ್ದಿದ್ದರೆ ಅದು ಅಸಹಜವಲ್ಲ. ತಮ್ಮಿಂದ ಉಪಕಾರ ಪಡೆದ ಚ್ಯವನನು ತಮ್ಮ ಮೇಲೆ ಕೋಪ ಮಾಡುವುದಿಲ್ಲವೆಂದು ಅವರಿಗೆ ಭರವಸೆಯಿದ್ದಿರಬೇಕು. ಇತ್ತ ಅವರ ಮೇಲೆ ಇವನಿಗೆ ಕ್ರೋಧಾಂಶವೇನಾದರೂ ಇದ್ದರೆ ಅದು ಹೋಗಿ ತನಗೆ ಈ ಉಪಕಾರ ಉಂಟಾದ್ದಕ್ಕೆ ಸಾಧನಳಾದ ತನ್ನ ಹೆಂಡತಿಯ ಮೇಲೂ ದೇವತೆಗಳ ಮೇಲೂ ಅವನು ಕೋಪಿಸಿಕೊಳ್ಳಲು ಹೆಚ್ಚು ಕಾರಣವಿರಕೂಡದು. – ಹೆಂಡತಿ

ದೇವತೆಗಳನ್ನು ಒಪ್ಪಿದ್ದರೆ, ಕಡ್ಡಾಯವಾಗಿ ತನ್ನವಳಾಗಬೇಕಾಗಿ ಬಂದ ಹೆಣ್ಣು ತನ್ನ ಬಳಿ ಇರುವಷ್ಟು ದಿನವೂ ಚೆನ್ನಾಗಿದ್ದು ತನ್ನ ಮೇಲೆ ಕೋಪ ಗೊಳ್ಳದೆ, ಉಪಚಾರ ಮಾಡಿ, ತನ್ನ ಸಂತೋಷವನ್ನು ಸಂಪಾದಿಸಿಕೊಂಡಳು ಎಂದು ಕೂಡ ಅವನು ಯೋಚಿಸಿರಬಹುದು. ಯಾವಾಗ ಸುಕನ್ಯೆ ತನ್ನ ಸಹ ವಾಸವೇ ಇರಲೆಂದು ತೀರ್ಮಾನಿಸಿದಳೋ ಆಗ ಋಷಿಯ ಮನಸ್ಸಿಗೆ ಪರಮಾ ನಂದವಾಗಿರಬೇಕು. ಹೆಚ್ಚು ಸುಂದರವಾದ, ಹೆಚ್ಚು ಸ್ವತಂತ್ರವಾದ, ಹೆಚ್ಚು ಪ್ರಾಮಾಣಿಕವಾದ ಪ್ರೇಮಲಾಭ ಋಷಿಗೆ ಆಗ ಪುನಃ ದೊರಕಿದಂತಾಯಿತು. ಆದುದರಿಂದಲೇ ತನಗೆ ಈ ಅತಿಶಯವಾದ ಪ್ರೇಮಭಿಕ್ಷೆಯನ್ನು ಕೊಟ್ಟಿದ್ದ ಕ್ಕಾಗಿ ಋಷಿ ಅಶ್ವಿನಿ ದೇವತೆಗಳಿಗೆ ಅನುಗ್ರಹ ಮಾಡಿದ್ದು. ಹಿಂದೆ ಅವರಿಗೆ ಇಲ್ಲದಿದ್ದ ಪದವಿಯನ್ನೂ ಸ್ಥಾನವನ್ನೂ ಮಾನವನ್ನೂ ದೊರಕಿಸಿಕೊಡು ತ್ತೇನೆಂದು ವಾಗ್ದಾನ ಮಾಡಿದ್ದು. ಇಂದ್ರನಿಗೆ ಸಮನಾಗಿ ಯಜ್ಞಶಾಲೆ ಯಲ್ಲಿ ಅವರಿಗೆ ಸೋಮಪಾನ ಮಾಡುವ ಹಕ್ಕನ್ನು ಕೊಡುತ್ತೇನೆಂದು ಋಷಿ ಹೇಳಿದ್ದು. ಇಂದ್ರನು ಕೋಪಿಸಿಕೊಂಡರೆ ಅದನ್ನು ಹುಲ್ಲುಕಡ್ಡಿಗೆ ಸಮವಾಗಿ ಎಣಿಸಿದ್ದು; ಅವನನ್ನು ಅಡಗಿಸಿದ್ದು.

ಅದೆಲ್ಲ ಹೇಗಾದರೂ ಇರಲಿ. ಚ್ಯವನ ಸುಕನ್ಯೆಯರ ದಾಂಪತ್ಯ ಪ್ರೇಮವೂ ಇಲ್ಲಿ ಕಾಣುವ ಜೀವನ ದರ್ಶನವೂ ವಿಶೇಷವಾದ್ದು. ನಿರ್ಬಂಧ ದಲ್ಲಿಯೂ ವಿರಸದಲ್ಲಿಯೂ ಮೊದಲಾಗಿ ವಿಚಿತ್ರ ರೀತಿಯಲ್ಲಿ ಪ್ರೇಮ ರಸಾಯನವಾದ ಒಂದು ಸಂದರ್ಭವನ್ನು ಈ ಪ್ರಸಂಗ ನಮಗೆ ತೋರಿಸಿ ಕೊಡುತ್ತದೆ. ಸುಕನ್ಯೆಯ ಪ್ರೇಮ ಸಾಧಾರಣವಾದ್ದಲ್ಲ. ಅವಳಿಗೆ ಬಂದ ಪರೀಕ್ಷೆಯೂ ಸಾಧಾರಣವಾದ್ದಲ್ಲ. ಅವಳ ಗಂಡನು ಮಾಡಿದ ಧಾರಾಳದ ಸಾಹಸ ಇತರರಿಗೆ ಶಕ್ಯವಿಲ್ಲ. ಅದು ಔದಾರ್ಯದ ಪರಮಾವಧಿ. ಸುಕನ್ಯೆಯ ಪ್ರೇಮವೂ ದೇವತೆಗಳನ್ನು ನಿರಾಕರಿಸಿ ತನ್ನ ಪತಿಪ್ರೇಮವನ್ನು ಸ್ಥಾಪಿಸಿ ಕೊಂಡಿತು. ಆದ್ದರಿಂದಲೇ ದಮಯಂತಿ ಸಾವಿತ್ರಿಯರ ಪಂಕ್ತಿಗೆ ಅವಳು ಸೇರಿರುವುದು.

---

# ಐವರು ಮಹನೀಯರು

ಮೊದಲ ನಾಲ್ಕು ಕಥೆಗಳಲ್ಲಿ ಕಾಣುವುದು ಪ್ರೇಮದ ಒಂದು ದರ್ಶನ; ದಾಂಪತ್ಯದ ನಾಲ್ಕು ಚಿತ್ರಗಳು. ಸಾಮಾಜಿಕ, ರಾಜಕೀಯ, ಧಾರ್ಮಿಕ ವ್ಯವಸ್ಥೆ ಯಾವ ದೇಶದಲ್ಲಿ ಯಾವ ಕಾಲದಲ್ಲಿ ಏರ್ಪಡಲಿ ಗಂಡು ಹೆಣ್ಣಿನ ಸಂಗ, ಆ ಸಂಗವನ್ನು ಬೆಸೆಯುವ ಪ್ರೇಮ, ಇವು ಕಟ್ಟಿಕೊಳ್ಳುವ ನೆಲೆ – ಇವುಗಳ ಸ್ಥಾನವನ್ನು ನಿರ್ದೇಶಿಸುವುದು ಮುಖ್ಯಾಂಶ; ಮೊದಲಗತ್ಯ. ಇದರಿಂದಲೇ ದಾಂಪತ್ಯ; ಇದರಿಂದಲೇ ಸಂತತಿ. ಇದರಿಂದಲೇ ಕುಟುಂಬ ರಚನೆ; ಇದಕ್ಕಾಗಿಯೇ ಸಮಾಜ ಜೀವನ. ಇದರ ಸುತ್ತಲೇ ಕಟ್ಟಿದ್ದು ವ್ಯವಹಾರ. ಯಾರೆಷ್ಟು ಲೌಕಿಕ ಜೀವನವನ್ನು ಅಲ್ಲಗಳೆಯಲಿ, ಜೀವನದ ಹೇಸಿಕೆಗಳನ್ನು ವಿಸ್ತರಿಸಿ ಬಣ್ಣಿಸಲಿ, 'ಮಾಂಸವಸಾದಿವಿಕಾರಂ' ಎಂದು ಚೆಲುವನ್ನು ನುಡಿದು, ವಿರಕ್ತಿಯನ್ನೂ ಸಂನ್ಯಾಸವನ್ನೂ ಮೋಕ್ಷಧರ್ಮ ವನ್ನೂ ಬೋಧಿಸಲಿ ಲೋಕ ಇರುವವರೆಗೂ ಈ ಪ್ರೇಮ ಬಾಂಧವ್ಯ ನಡೆಯುವುದು. ಇದಕ್ಕೆ ಸಂಬಂಧಿಸಿದ ಸಮಸ್ಯೆಗಳು ಬಗೆ ಹರಿಯಬೇಕಾಗು ವುದು. ಸೃಷ್ಟಿಯ ನಿಯಮದಲ್ಲಿ ಗಂಡು ಹೆಣ್ಣುಗಳ ಆಕರ್ಷಣೆ ಮೂಲಾಂಗ; ಜೀವಶಕ್ತಿ ಎಂದಿಗೂ ಅಡಗಿಸಲಾಗದ ಸಹಜ ಸ್ವಭಾವ. ಇದನ್ನು ತುಳಿದು ಅಥವಾ ಇದಕ್ಕೆ ಬೆಲೆ ಕೊಡದೆ ಕಟ್ಟಿದ ಯಾವ ಧರ್ಮವೂ ಕರ್ಮವೂ ನೆರವೇರಿಲ್ಲ. ೫೦೦೦ ವರ್ಷಗಳ ಮಾನವ ಚರಿತ್ರೆ ಇದಕ್ಕೆ ನಿದರ್ಶನ ಎಷ್ಟು ಮಂಜು ಬೀಳಲಿ, ಬೇಗೆಯಿಂದ ನೆಲ ತಾರಿರಲಿ, ಒಂದು ಹದ ಮಳೆ ಬಿದ್ದ ಒಡನೆಯೇ ನೆಲ ಚಿಗುರುವಂತೆ, ಎಲ್ಲೆಲ್ಲೂ ಹಸುರು ಒಸರುವಂತೆ ಯೌವನವೇರಿದ ಕೂಡಲೆ ಪ್ರೇಮ ಜೀವನ ಚಿಗುರುವುದು; ಚಿಮ್ಮುವುದು. ಕಣ್ಣು ಸೆಳೆ ಮನಸ್ಸಿನ ಮೋಹ ಆಗುವುದು; ಕಾಮವಾಗುವುದು. ಅದರ ಸವಿಯನ್ನೂ ಸುಖವನ್ನೂ ಅನುಭವಿಸುವ ಪ್ರವೃತ್ತಿ ಸರ್ವತ್ರ ಹರಡುವುದು. ಇದು ಪ್ರಕೃತಿಯ ನಿಯಮ. ಇಂಥಲ್ಲಿ ಚಪಲ, ಸ್ವಾರ್ಥ, ದೌರ್ಜನ್ಯ,

ವಂಚನೆ, ಅತಿ ಉದ್ರೇಕ, ವಿನಾಶಕರ ವೃತ್ತಿಗಳು ಪ್ರಬಲಿಸಿದರೆ ಕೇಡುಂಟು. ಹಾಗೆ ಆಗದಂತೆ ನೋಡಿಕೊಳ್ಳಬೇಕಾದ್ದು ಮಾತ್ರ ಎಲ್ಲರ ಕರ್ತವ್ಯ. ಯಾವ ರಸ ಧಾತು ಇದ್ದರೆ ಇದು ತಿಳಿಯಾಗಿ ಜನರ ಸಂತೋಷಕ್ಕೂ ಲೋಕದ ಮಂಗಳಕ್ಕೂ ನೆರವಾದೀತು ಎಂಬುವನ್ನು ಧರ್ಮವೂ ಕರ್ಮವೂ ಸಾಧಿಸಬೇಕು. ಪ್ರೇಮ ಸಹಜವಾಗಿ ಹುಟ್ಟುತ್ತದೆ. ಎಲ್ಲಿ ಏಕೆ ಬಲಿಯುತ್ತದೆ ಎಂದು ಹೇಳುವುದು ಕಷ್ಟ. ಬುದ್ಧಿಶಕ್ತಿ ಅಲ್ಲ, ಪದವಿಯಲ್ಲ, ಹಣವಲ್ಲ, ಇನ್ನೇನೋ ಜನರನ್ನು ಸೆಳೆಯುತ್ತದೆ, ಒಲಿಸುತ್ತದೆ, ಕೂಡಿಸುತ್ತದೆ, ಬಂದಿ ಹಿಡಿಯುತ್ತದೆ. ಇದು ರಕ್ತದ ಕರೆ; ಆವೇಶ. ಇದನ್ನು ತುಳಿಯುವುದು ಕಷ್ಟ. ಇದರ ಕಾವು ನೋವು ದುಃಸಹ. ಇದನ್ನು ದಾಟುವುದು ಬಹುಶಃ ಸಾಮಾನ್ಯರಿಗೆ ಸಾಧ್ಯವಿಲ್ಲ. ಹರಿಹರ ಬ್ರಹ್ಮಾದಿಗಳು ಇದನ್ನು ನಾಶ ಮಾಡುವುದು ಶಕ್ಯವಿಲ್ಲವೆಂಬಂತೆ ಕಾಣುವುದು. ಅಸಾಮಾಜಿಕ ವೃತ್ತಿಗಳೂ ಕಪಟದ್ರೋಹಗಳೂ ಬೆಳೆದಾಗ ಹೊರತು, ಸಮಾಜದಲ್ಲಿ ಇದರ ಸಾಧನೆಗೆ ಅವಕಾಶವಿರಬೇಕು. ಇದನ್ನರ್ಥಮಾಡಿಕೊಂಡು ಆಚಾರ ಸಂಪ್ರದಾಯಗಳು, ಧರ್ಮಕ್ಕೆ ಚ್ಯುತಿ ಬಾರದಂತೆ ರೂಪುಗೊಳ್ಳಬೇಕು. ಕಾಲಕಾಲಕ್ಕೆ ತಕ್ಕಂತೆ ಮಾರ್ಪಡುತ್ತಿರಬೇಕು. ಇಲ್ಲವಾದರೆ ಇವು ಗೆದ್ದೀತೇ ಹೊರತು ಸಮಾಜ ಗೆಲ್ಲುವುದಿಲ್ಲ. ಸಮಾಜದ ಗೆಲವನ್ನು ಸ್ಥಾಪಿಸಹೋದರೆ ಅದು ನಿರ್ವೀರ್ಯವಾಗುವುದು. ಮುಚ್ಚುಮರೆ ಬೆಳೆಯುವುವು. ಅರ್ಥ ಕಾಮಗಳು ತುಂಬಾ ಪ್ರಭಾವವುಳ್ಳ ಪ್ರವೃತ್ತಿಗಳು. ಆದುದರಿಂದಲೇ ಅವಕ್ಕೆ ನಮ್ಮವರು ಪುರುಷಾರ್ಥಗಳಲ್ಲಿ ಸ್ಥಾನವನ್ನು ಕೊಟ್ಟರು. ಧರ್ಮಕ್ಕೆ ಒಳಪಟ್ಟು ಅವನ್ನು ಸಂಪಾದಿಸಬಹುದು, ಸಂತೋಷಪಡಬಹುದು ಎಂದರು.

ಆದರೆ ಪ್ರೇಮ ಒಂದು ಸಾಕು, ಉಳಿದ ಯಾವ ನಿರ್ಬಂಧವೂ ಚಿಂತೆಯೂ ಬೇಡ ಎಂಬ ಮಾತಿನಿಂದ ವ್ಯಕ್ತಿಗೆ ಕೀರ್ತಿಯಿಲ್ಲ; ಸಮಾಜಕ್ಕೆ ಹಿತವಿಲ್ಲ. ಧರ್ಮವಂತೂ ಇಲ್ಲ. ನಿಯಮ ಸಂಯಮಗಳಿಲ್ಲದೆ ನಡೆದ ಯಾವುದೂ ಪದವನ್ನು ಮೀರುತ್ತದೆ. ಅದರಿಂದ ಅದಕ್ಕಾಗಲಿ ಸುತ್ತಲ ಆವರಣಕ್ಕಾಗಲಿ ಲಾಭ ಬಾರದು. ಅದನ್ನು ಸ್ವಪ್ರಯೋಜನಕ್ಕೆ ಬಳಸಿಕೊಳ್ಳುವ ಅವಕಾಶವೂ ದುರ್ವರ್ತನೆಯೂ ಬಲಿಷ್ಠರಲ್ಲಿ ಬೆಳೆಯಬಹುದು.

ಎಲ್ಲಕ್ಕಿಂತ ಹೆಚ್ಚಾಗಿ ಬಹು ಮಂದಿ ಪ್ರಪಂಚದಲ್ಲಿ ಒಂಟಿಯಾಗಿ ಬದುಕಲಾರರು. ಎಲ್ಲರೂ ಸಾಮಾನ್ಯವಾಗಿ ಜನರ ನಡುವೆ ಇರಬೇಕು. ಸಮಾಜದಲ್ಲಿ ಹುಟ್ಟುವುದು, ಸಮಾಜದ ನಡುವೆ ಬಾಳುವುದು ಅನಿವಾರ್ಯವೆಂದಾಗ ಅದಕ್ಕೆ ಹೊಂದಿಕೊಂಡು ಅದಕ್ಕೆ ವಿರೋಧವಾಗದಂತೆ ಒಂದು ಸಮರಸ ಜೀವನವನ್ನು ನಡಸಿಕೊಳ್ಳಬೇಕಾಗುತ್ತದೆ. ಮೀರಿದರೆ, ವಿರೋಧವಾದರೆ ಬದುಕು ಅಸಾಧ್ಯವೆಂದಲ್ಲ, ಕಷ್ಟವಾಗುತ್ತದೆ. ಆದುದರಿಂದ ಕೂಡ ತನ್ನ ಶುಚಿಯನ್ನೂ ಧರ್ಮವನ್ನೂ ಕಾಪಾಡಿಕೊಳ್ಳುವುದು ಪ್ರೇಮದ ಪ್ರಯತ್ನವಾಗಬೇಕು. ಈ ಎರಡು ಮಿತಿಗಳು ಇರುವವರೆಗೂ ಎಂಥ ಸಮಾಜಕ್ಕಾದರೂ ಪ್ರೇಮ ಮಾನ್ಯವಾಗಬೇಕಾದ್ದೇ ಸರಿ.

ಇಲ್ಲಿನ ಒಂದೊಂದು ಕಥೆಯಲ್ಲಿಯೂ ಪ್ರೇಮ ದಾಂಪತ್ಯಗಳ ಒಂದೊಂದು ಲಕ್ಷಣವೂ ಒಂದೊಂದು ಬಗೆಯ ಕಷ್ಟನಿಷ್ಠುರವೂ ಕಾಣುತ್ತದೆ. ಚೆಲುವೆ ಹೆಂಗಸು ಬಿಡಿಯಾಗಿದ್ದರೆ ದೇವತೆಗಳ ಕಣ್ಣು ಬಿದ್ದು ಕಾಮಿಸುವುದು; ಸವಿ ಮಾತನಾಡಿ ಮನಸ್ಸನ್ನು ಚಲಿಸುವಂತೆ ಮಾಡುವುದು. ಆದರೆ ಈ ಎಲ್ಲ ಕಥೆಗಳ ಪರಿಶುದ್ಧಿಯೂ ಒಂದೇ ಬಗೆಯಾದುದು. ಎಲ್ಲಿಯುವರೆಗೆಂದರೆ ಅಲ್ಲಿಯವರೆಗೆ ಹೋಗಿ ತನ್ನ ಧರ್ಮವನ್ನು ಕಾಪಾಡಿಕೊಂಡದ್ದು. ತಾನು ಬದುಕಿ ಇನ್ನೊಂದನ್ನು ಬದುಕಿಸಿಕೊಂಡದ್ದು. ಈ ಕಥೆಗಳಲ್ಲಿನಷ್ಟು ಧಾರಾಳವೂ ಸ್ವತಂತ್ರವೂ ಬೇರೆಯಲ್ಲಿ ಕಾಣದು. ಇಷ್ಟು ಸ್ವಾತಂತ್ರ್ಯ ಧಾರಾಳ ಇರುವಾಗ ತಮ್ಮನ್ನು ತಾವು ಕಾಪಾಡಿಕೊಂಡು ತಮ್ಮ ಕಾಲಕ್ಕೂ ಎಲ್ಲ ಕಾಲಕ್ಕೂ ಮೆಚ್ಚುಗೆಯಾಗಬಲ್ಲ ಚರಿತಾರ್ಥತೆಯ ಚಿತ್ರ ಇಲ್ಲಿ ಕಾಣುತ್ತದೆ. ಗಂಡಿಗಿಂತ ಹೆಣ್ಣು, ಹೆಣ್ಣಿಗಿಂತ ಗಂಡು ಪರಸ್ಪರವಾಗಿ ಒಲಿಯುತ್ತವೆ. ಒಂದರ ಗುಣಕ್ಕೆ ಇನ್ನೊಂದು ಸೋಲುತ್ತದೆ. ಗೆಲ್ಲುತ್ತದೆ. ಉಳಿಸಿಕೊಳ್ಳುತ್ತದೆ. ಪರಸ್ಪರ ನಿಷ್ಠೆಯಿಂದ ಕೃತಾರ್ಥವಾಗುತ್ತದೆ. ಕಡೆಗೆ ಶಕುಂತಲೆ, ದಮಯಂತಿ, ಸಾವಿತ್ರಿ, ಸುಕನ್ಯೆ ಇಂಥವರ ಪ್ರೇಮಕ್ಕೆ ಪಾತ್ರರಾದ ಗಂಡಸರು ಅವರನ್ನು ಕಂಡು ಗೌರವ, ಭಕ್ತಿ ತೋರಿಸಿ ನಡೆದುಕೊಳ್ಳಬೇಕೇ ಹೊರತು ಅವರನ್ನು ಹಗುರವಾಗಿ ಕಾಣುವುದು ಹೇಗೆ ಶಕ್ಯವಾದೀತೋ. ಅವರ ಗುಣಶೀಲ ಅಷ್ಟು ದೊಡ್ಡವು; ಅವರ ಪ್ರೇಮದಕಟ್ಟು ಅಷ್ಟು

ಬಿಗಿ. ಪ್ರೇಮವೆಂಬುದು ಒಂದು ನಿಮಿಷದ ರಕ್ತದ ಓಟ, ಒತ್ತಡವಲ್ಲ. ಒಂದು ಆಸೆ, ಬೇನೆ, ಸಖಸಾಧನೆ; ಉದ್ವೇಗ ಅಲ್ಲ. ಹಾಗೆ ಮೊದಲಾಗುತ್ತದೆ. ಬಲಿಬಲಿಯುತ್ತ ಒಬ್ಬರ ನೆನಪಿನಲ್ಲಿ, ಪ್ರೀತಿಯಲ್ಲಿ ಒಬ್ಬರನ್ನೊಬ್ಬರು ಕಾಪಾಡಿ, ಸುಖದಲ್ಲಿ ಉಲ್ಲಾಸಪಟ್ಟು ಒಬ್ಬರ ಕುಂದನ್ನು ಇನ್ನೊಬ್ಬರು ತುಂಬಿಕೊಟ್ಟು ಬಾಳುವ ಒಡಬಡುಕಿಗೆ ತೋರುವ ಕೃತಜ್ಞತೆ; ಗೌರವ. ಕಡೆಗೆ ಈ ಪ್ರೈ ಆ ಪ್ರೈಗೆ ಮರ್ಯಾದೆ ಸಲ್ಲಿಸಿ ನಡೆಯುತ್ತದೆ. ಅದರ ಶುಚಿಗಾಗಿ ಇದು ತಾನು ಶುಚಿಯಾಗಿರುತ್ತದೆ. ಕುಂದು ಏನೇ ಇರಲಿ ಮೂರನೆಯದನ್ನು ಬಯಸದೆ, ತಾನು ವಿಕಾರಗೊಳ್ಳದೆ, ಚಲಿಸದೆ ತನ್ನನ್ನು ಇದಕ್ಕೆ ಮುಡಿಪು ಮಾಡಿಕೊಳ್ಳುತ್ತದೆ. ಆ ಬಗೆಯ ವಿಶ್ವಾಸಲಳಿಯದ ನಡತೆಯೂ ಮನೋವ್ಯಾಪಾರವೂ ಇಲ್ಲದ ಕಡೆ ಸ್ಥೈರ್ಯವಿರುವುದಿಲ್ಲ, ನಿಜವಾದ ಪ್ರೇಮವಿಲ್ಲ. ಪ್ರೇಮದ ಚುರುಕೂ ಸಂಜೀವನವೂ ಇಲ್ಲದ ಕಡೆ ದಾಂಪತ್ಯಜೀವನ ಜಡ. ಅದು dull habit ಎಂಬ ತೆಗಳಿಕೆಯ ನೀರಸ ಸಹವಾಸವಾಗುತ್ತದೆ. ಕುಮತಿಗಳು ಜನಸಾಮಾನ್ಯರ ರೂಢಿಯ ದಾಂಪತ್ಯ ಸಂಗವನ್ನು ಹೀಗೆನ್ನುವುದುಂಟು. ಇದರಲ್ಲಿ ಸತ್ಯಾಂಶವಿಲ್ಲದೆ ಇಲ್ಲ. ಪ್ರೇಮವು ನಿತ್ಯ ಹೊಸತಾದ ಮನಸ್ಸಿನ ಒಂದು ಪ್ರಕಾರ. ನಡವಳಿಕೆ ನಡಸಿ ಕಾಪಾಡುವ ಶಕ್ತಿ. ಗಂಡು ಹೆಣ್ಣುಗಳ ಪ್ರೇಮ ಹೀಗೆ ಹುಟ್ಟಿ ಬೆಳೆದು ಹೀಗೆ ದೃಢವಾದರೆಯೇ ಸಮಾಜಕ್ಕೆ ಕಲ್ಯಾಣ. ಸ್ವಚ್ಛಂದವಾದರೆ, ಚಪಲದಿಂದ ಕೂಡಿದರೆ, ಸಡಿಲವಾದರೆ ಪುಣ್ಯವಿಲ್ಲ. ಪುರುಷಾರ್ಥವೂ ಇಲ್ಲ.

ತಂದೆ ತಾಯಿ, ಗುರು ಹಿರಿಯರು ಯಾರಿಗೂ ತಿಳಿಯದಂತೆ ಏಕಾಂತದಲ್ಲಿ ತನ್ನನ್ನು ಮತ್ತೊಬ್ಬನಿಗೆ ತೆತ್ತುಕೊಂಡು ಆದರ ಫಲವಾಗಿ ಮೊದಲು ಕಷ್ಟಕ್ಕೆ ಈಡಾದಳು. ಆದರೂ ಅವನಿರುವಲ್ಲಿಗೆ ಹೋಗಿ ನಿಂತು ತನ್ನ ಸ್ಥಾನವನ್ನೂ ಮಾನವನ್ನೂ ಪ್ರೇಮವನ್ನೂ ಸಂಪಾದಿಸಿಕೊಂಡದ್ದು ಮಹಾಭಾರತದ ಶಕುಂತಲೆಯ ಸಾಹಸ. ಚಾಟೂಕ್ತಿಗಳನ್ನಾಡಿ ವಶಮಾಡಿಕೊಂಡ ಮನುಷ್ಯನು ಕೊಟ್ಟಮಾತಿಗೆ ತಪ್ಪಿದಾಗ ಆದೇ ಮನುಷ್ಯನು ರಾಜನಾಗಿದ್ದರೆ? ರಾಜನೇ ಅನ್ಯಾಯದಿಂದ ನಡೆದುಕೊಳ್ಳುತ್ತಿರುವಾಗ ತುಂಬಿದ ಸಭೆಯಲ್ಲಿ ಅವನನ್ನು ಎದುರಿಸಿದಳು. ನಾನೇನೋ ಈಗ ಅಸಾಕ್ಷಿಣಿ, ಮಂದಭಾಗ್ಯಳು,

ಬಂದ ದಾರಿ ಹಿಡಿದು ಹೋಗುತ್ತೇನೆ. ನನ್ನ ಕಷ್ಟ ನನ್ನದು. ಆದರೂ ನಿನ್ನಂಥವನಿಗೆ ಅಪ್ರಾಮಾಣಿಕತೆ ತಕ್ಕುದಲ್ಲ ಸತ್ಯವೆಂದು ನಿನ್ನ ಹೃದಯವೂ ಮನಸ್ಸೂ ಕಣ್ಣೂ ಹೇಳುತ್ತಿರುವುದನ್ನು ನೀನು ನಾಚಿಕೆಯಿಲ್ಲದೆ ನಿರಾಕರಿಸು ತ್ತಿದ್ದೀಯೆ. ಇದು ಪ್ರಾಕೃತರೂ ಧೂರ್ತರೂ ಮಾಡುವ ಕೆಲಸ ಎಂದು ಆಕೆ ಅಂಜಿಕೆಯಿಲ್ಲದೆ ನುಡಿದಳು. ಇದಕ್ಕೆ ರಾಜನೇ ಏಕೆ ದೇವತೆಗಳೂ ಬಾಗ ಬೇಕಾದ್ದೇ. ಸತ್ಯವಂತರ ಕೋಪ ಸ್ವರ್ಗವನ್ನು ಸೆರೆಹಿಡಿಯಬಲ್ಲದು. ಅದನ್ನು ಹಿಂದಿ ಲೋಕ ಹಿತವನ್ನು ಕರೆದುಕೊಳ್ಳಬಲ್ಲದು. ಅವರವರ ಧರ್ಮದಲ್ಲಿ ಅವರು ಬದುಕಿದರೆ ಧರ್ಮವನ್ನು ಉಳಿಸುವುದು ದೇವತೆಗಳ ಹೊಣೆಗಾರಿಕೆಯಲ್ಲವೆ ? ಆದರೂ ಆ ಕಥೆಯನ್ನು ಓದಿದವರಿಗೆ ರಹಸ್ಯ ಪ್ರೇಮ ದಿಂದ ಕಷ್ಟ ನಿಷ್ಠುರಗಳುಂಟು ಎಂಬ ಸಂಗತಿ ಚೆನ್ನಾಗಿ ಮುಂದಟ್ಟಾಗುವುದು. ಹೆಂಗಸು ತಬ್ಬಲಿಯಾಗಿ ಬೀದಿಗೆ ಬೀಳುವಳು, ಅವಳನ್ನು ಹಾಗೆ ಸಿಕ್ಕಿಸಿ ಗಾಸಿ ಪಡಿಸಬಾರದು ಎಂದು ಲೋಕಕ್ಕೆನ್ನಿಸಬೇಕು. ಆದುದರಿಂದಲೇ ಹತ್ತು ಜನರ ಮುಂದೆ, ಅಗ್ನಿಯ ಮುಂದೆ, ದೇವಸಾಕ್ಷಿಕವಾಗಿ ಸಾಕಾದಷ್ಟು ಪ್ರಕಟವಾಗಿ ವಿವಾಹ ನಡೆಯಬೇಕೆಂದು ಲೋಕದಲ್ಲಿ ಏರ್ಪಾಡು.

ಇನ್ನೊಂದು ಕಥೆಯಲ್ಲಿ ನಳನಿಗಿಂತ ದಮಯಂತಿ ಹೆಚ್ಚು ಪ್ರಭಾವ ಯುತಳು. ದಿಕ್ಪಾಲಕರು ಆಕೆಯನ್ನು ಬಯಸಿ ಪ್ರಾರ್ಥನೆ ಮಾಡಿದರೂ ನಳನಿಗಾಗಿಯೇ ತನ್ನ ಮನಸ್ಸನ್ನು ಸ್ಥಿರಮಾಡಿಕೊಂಡಿದ್ದಾಳೆ. ಅವರೆಲ್ಲ ರನ್ನೂ ನಿವಾರಿಸಿ ಅವರಿಗೇ ಆಕೆಯಲ್ಲಿ ಗೌರವ ಉಂಟಾಗುವಂತೆಯೂ ಅವರೇ ಆಕೆಯ ನಿಷ್ಠೆಯನ್ನು ಮೆಚ್ಚುವಂತೆಯೂ ನಡೆದು ನಳನ ಕೈ ಹಿಡಿದಿದ್ದಾಳೆ. ಅವನಿಗೆ ಸಂಸಾರ ಮಾಡಿ ಅವಳಿಮಕ್ಕಳನ್ನು ಪಡೆದಿದ್ದಾಳೆ. ಜೂಜಾಡಿ ಎಲ್ಲವನ್ನೂ ಕಳೆದುಕೊಂಡು ಅವನು ಕಾಡು ಪಾಲಾದರೂ ತನ್ನ ಮಾನಾಪ ಮಾನಗಳನ್ನೂ ಸುಖ ದುಃಖಗಳನ್ನೂ ಲೆಕ್ಕಿಸದೆ ಅವನ ಜೊತೆಯಲ್ಲಿಯೇ ಉಳಿಯುವೆನೆಂದು ಸಹಧರ್ಮಿಣಿಯಾಗಿ ನಡೆದಿದ್ದಾಳೆ. ಒಡವೆ, ವಸ್ತು, ಸುಖ, ಸ್ಥಾನ, ಇವಲ್ಲ ಮುಖ್ಯ. ತಾನು ಒಲಿದು ಒಪ್ಪಿದ ಗಂಡನಿಗೆ ಕಷ್ಟವಾದರೆ ತನಗೂ ಕಷ್ಟವೇ ಸೈ. ಸುಖವಾದರೆ ಸುಖ. ಒಡಬಾಳು ಬಾಳಿ ಕಷ್ಟ ಸುಖಗಳನ್ನು ಅನುಭವಿಸೋಣ. ತಂದೆಯ ಮನೆಗೆ

ಹೋಗುವುದಿಲ್ಲ ಎಂದು ಆಕೆ ಹೇಳಿದಳು. ಹೀಗಿರುವಾಗ ಆಕೆಗೆ ಮೋಸ ಮಾಡಿ ನಡುಗಾಡಲ್ಲಿ ತಬ್ಬಲಿಯಾಗಿ ಆಕೆಯನ್ನು ಬಿಟ್ಟು ಹೊರಟುಹೋದ ಗಂಡನನ್ನು ಪುನಃ ಹುಡುಕಿಸುತ್ತಾಳೆ; ತನ್ನ ಬಳಿಗೆ ಬರಿಸಿಕೊಳ್ಳುತ್ತಾಳೆ. ಸಾಮಾನ್ಯರಿಗೆ ಭಯ ಬರುವಷ್ಟು ಧಾರಾಳವಿದೆ ಅವಳ ನಡತೆಯಲ್ಲಿ, ಈ ವಿಧಾನಗಳಲ್ಲಿ. ನೆತ್ತರ ಕಂಪಿಂದ ಕೊಲೆಗಾರನನ್ನು ಹುಡುಕಿ ತರುವ ಬೇಟೆನಾಯಿ ದಕ್ಷತೆಯಲ್ಲಿ ಆಕೆಗೆ ಸಾಟಿಯಲ್ಲ. ಅವನು ಎದುರಿಗೆ ಬಂದಾಗ "ಪುತ್ರಿಣಿಯಾಗಿ, ನಿನ್ನ ಪ್ರೀತಿಗಾಗಿ ಜೀವಹಿಡಿದು ನಿನ್ನ ಸುಖಕ್ಕಾಗಿ ಕಾತರಳಾಗಿರುವ, ನಿನ್ನನ್ನು ನಂಬಿರುವ ಮಡದಿಗೆ ಹೀಗೆ ಅನ್ಯಾಯ ಮಾಡಬಹುದೆ" – ಎಂದು ಪ್ರಶ್ನೆ ಹಾಕುತ್ತಾಳೆ. ಇದು ತಕ್ಷಣಕ್ಕೆ ಅಪ್ರಿಯದಂತೆ ಕಂಡರೂ ಪ್ರೇಮ, ಧರ್ಮ, ಧೈರ್ಯ, ಶುಚಿ, ಶೀಲ – ಎಲ್ಲಬಗೆಯ ರಸವೂ ಸೇರಿದ ರಸಾಯನ. ಇಂತಹ ಹೆಂಡಿರೊಡನೆ ಸಂಸಾರ ಮಾಡುವುದು ಕಷ್ಟವೇನೋ ನಿಜ! ಒಂದೊಂದು ರಸವನ್ನೂ ಜೀರ್ಣಿಸಿ ಕೊಳ್ಳುವುದು ಗಂಡಸಿಗೆ ಪ್ರಯಾಸವಾಗುವುದು. ಆದರೆ ಇಂಥ ಪ್ರೇಮದ ಕಾಣಿಕೆ ಪಡೆದ ನಳನು ಪುಣ್ಯಶಾಲಿ.

ಇಲ್ಲಿ ಎಷ್ಟು ವೀರ, ಸಾಹಸ ಇವೆಯೋ ಇವಕ್ಕಿಂತಲೂ ಕಡಮೆಯಿಲ್ಲದ ವೀರವೂ ಸಾಹಸವೂ ಸಾವಿತ್ರಿಯವು. ದಮಯಂತಿಯ ಗಂಡ ಬದುಕಿದ್ದಾನೆ. ಎಲ್ಲಿಯೋ ಇದ್ದಾನೆ. ಅವನನ್ನು ಹುಡುಕಿ ತರಬೇಕು ಮಾತ್ರ. ಜೀವ ವಿರುವಲ್ಲಿ ಭರವಸೆಯುಂಟು. "ಗುರ್ವಪಿ ವಿರಹ ದುಃಖಂ ಆಶಾಬಂಧಃ ಸಾಹಯತಿ" (ಆಶೆಯ ಕಟ್ಟು ಅಗಲಿಕೆಯ ದುಃಖವನ್ನು ಸಹಿಸುವಂತೆ ಮಾಡುವುದು), ಅವನನ್ನು ಸೇರಬಹುದು ಎಂಬ ನಂಬಿಕೆ ಹೆಚ್ಚು ಸುಲಭ. ತಾನು ಸರಿಯಾಗಿ ಇರುವವರೆಗೂ ತನ್ನ ಪ್ರಿಯಪತಿಯನ್ನು ಪಡೆದುಕೊಳ್ಳುವ ಅವಕಾಶವುಂಟು. ಸಾವಿತ್ರಿಗೆ ಈ ಅವಕಾಶ ದೊರೆತಂತೆ ಕಾಣಲಿಲ್ಲ. ಬಹು ಕಾಲ ಮದುವೆಯಾಗದೆ ಯಾವ ವರನೂ ಈಕೆಯನ್ನು ವರಿಸಲು ಬಾರದುದನ್ನು ಕಂಡು ತಂದೆ ನಿರಾಶನಾಗಿರುವಾಗ ಆತನ ಅಪ್ಪಣೆಯಂತೆ ತಾನಾಗಿ ಹೋಗಿ ನಾಡು ಕಾಡು ಸುತ್ತಿ ಹುಡುಕಿ ಆಕೆ ಸತ್ಯವಾನನನ್ನು ಆಯ್ದುಕೊಂಡಳು. ಆಯ್ದು ವಾಗಿಯಿತು. ಮನಸ್ಸು,

ಪ್ರಾಣ, ಧರ್ಮ ಎಲ್ಲ ಈಗ ಅವನವು. ಅವನು ಒಂದು ವರ್ಷದ ಒಳಗೆ ಮೃತನಾಗುವನೆಂದು ತಿಳಿದದ್ದು ಆ ಬಳಿಕ. ಆದರೇನು ? ಆಕೆಯ ಮನಸ್ಸು ಒಮ್ಮೆಟ್ಟಲಿಲ್ಲ. ವಿಧಿಯನ್ನು ಕೆಣಕಿತು. ಯಮನನ್ನು ಹಿಂಬಾಲಿಸಿತು. ಅವನ ಹೃದಯವನ್ನು ಕರಗಿಸಿತು; ಅವನ ಮೆಚ್ಚಿಕೆಯನ್ನು ಪಡೆಯಿತು; ತನ್ನ ಪತಿಯನ್ನು ಉಳಿಸಿಕೊಂಡಿತು; ತಾಯಿ, ತಂದೆ, ಅತ್ತೆ, ಮಾವ ಎಲ್ಲರನ್ನೂ ಅಭಿವೃದ್ಧಿಗೆ ನಡಸಿತು. ತನ್ನ ಸಂಸಾರವು ಅತಿಶಯವಾದ ಸಂತೋಷಕ್ಕೂ ಏಳಿಗೆಗೂ ಬರುವಂತೆ ವರಗಳನ್ನು ಪಡೆದುಕೊಂಡಿತು. ಯಮನು ದುಷ್ಟರನ್ನು ದಂಡಿಸುವ, ನಿಷ್ಠುರವಾಗಿ ನಿಯಮವನ್ನೇ ಪಾಲಿಸುವ ದೇವನೇನೊ ನಿಜ; ಅವನು ಧರ್ಮರಾಜನೂ ಹೌದು ಎಂಬ ದರ್ಶನವನ್ನು ಲೋಕಕ್ಕೆ ಮಾಡಿಕೊಟ್ಟಿತು. ಸಾವು ಬದುಕುಗಳ ರಹಸ್ಯವನ್ನು ಲೋಕಕ್ಕೆ ತಿಳಿಸಿತು.

ಈ ತೂಕಗಳಿಗೂ ಉನ್ನತಿಗೂ ರುರು ಮಹರ್ಷಿಯ ಕ್ರಿಯೆ ಬರುತ್ತದೆಯೋ ಬಾರದೋ. ಆದರೆ ಗುಣದಲ್ಲಿಯೂ ನಿಷ್ಠೆಯಲ್ಲಿಯೂ ಪ್ರೇಮದ ನಿಜವಾದ ಸಂಪನ್ನತೆಯಲ್ಲಿಯೂ ರುರುವಿನದು ಉಳಿದ ಯಾವುದಕ್ಕೂ ಕಡಮೆಯಲ್ಲ. ಇನ್ನೂ ತಾನು ಮದುವೆಯಾಗದ ಹೆಣ್ಣು ಪ್ರಮದ್ವರೆ. ಅವಳ ಕಾಲ ಮುಗಿದು ತೀರಿಕೊಂಡಿದ್ದಾಳೆ. ತನ್ನ ಆಯುಷ್ಯದ ಅರ್ಧವನ್ನು ದಾನಮಾಡಿ ಅವಳ ಮೃತ ಕಳೇಬರಕ್ಕೆ ಜೀವವೆರೆದವನು ಅವನು. ಎಂದರೆ ಸತ್ತುದನ್ನು ಅವನೂ ಉಳಿಸಿಕೊಂಡು ತನ್ನ ಪ್ರೀತಿಯ ವಸ್ತುವನ್ನಾಗಿ ಮಾಡಿಕೊಂಡವನೇ. ಜೀವ ಹೆಣ್ಣಿನದಾದರೇನು? ಗಂಡಿನದಾದರೇನು? ಪ್ರೀತಿಗೂ ನಿಷ್ಠೆಗೂ ಒಂದು ಮೇಲು ಒಂದು ಬೀಳು ಎಂಬ ಅಸಮದೃಷ್ಟಿಯೂ ವಿಷಮ ದೃಷ್ಟಿಯೂ ಸಲ್ಲದು.

ಈವರೆಗೂ ಜನ ಜೀವನದಲ್ಲಿ ಧರ್ಮ ಕರ್ಮಗಳ ವಿವೇಚನೆ ನಡೆಯುವಾಗ ಗಂಡಿನ ಕೈ ಮೇಲಾಗಿತ್ತು. ಹೆಣ್ಣಿಗಿಂತ ಗಂಡೇ ಹೆಚ್ಚು ಎಂಬಂತೆ ನಡೆಯಿತು. ಹೆಣ್ಣು ಬೆಲೆ ಗಂಡಿನದಕ್ಕಿಂತ ಕಡಮೆ ಎಂಬಂತೆ ತೂಗಿತು. ಹೆಣ್ಣಿಗೆ ಪಾತಿವ್ರತ್ಯ ಧರ್ಮವನ್ನೂ ಶುಚಿಯನ್ನೂ ಬೋಧಿಸಿ ನೇಮವನ್ನಾಗಿ ಮಾಡಿ, ತಾನು ಬೇಕಾದ ಧಾರಾಳಗಳನ್ನೂ ವಹಿಸಿತು. ತಾನು ಕೈ ಹಿಡಿದ

ಹೆಣ್ಣನ್ನು ಸರಿಯಾಗಿ ಬಾಳಿಸದೆ ಕ್ರೂರವಾಗಿ ನಡೆದುಕೊಂಡು ತಪ್ಪನ್ನೆಲ್ಲ ಅದರ ಮೇಲೆ ಹೊರಿಸಿ ಮಾತನಾಡುತ್ತಿತ್ತು. ಮನಸ್ಸನ್ನು ಹಲವು ಕಡೆ ಹರಿಯಗೊಟ್ಟು ಬಹುದಾರಾಪರಿಗ್ರಹ ಮಾಡಿ ಮೆರೆಯಿತು. ಕಣ್ಣೀರು ಕಾಲುವೆಗಳನ್ನು ದಾಟಿ ಕಾಮಸಾಧನೆ ಮಾಡಿಕೊಂಡಿತು. ಗಂಡಿಗೆ ಒಂದು ಧರ್ಮ, ಹೆಣ್ಣಿಗೆ ಬೇರೆ ಧರ್ಮ ಎಂಬಂತೆ ನಡೆದು ಸಮಾಜದ ನಿಯಮ ಗಳನ್ನೂ ರಾಜ ಶಾಸನಗಳನ್ನೂ ಧರ್ಮ ಸೂತ್ರಗಳನ್ನೂ ಒಡ್ಡಿತು. ಹೀಗಿರು ವಾಗ ತಾನು ಒಲಿದು ಪ್ರೀತಿಸಿದ ಹೆಣ್ಣಿಗಾಗಿ ತನ್ನ ಜೀವವನ್ನು ರುರು ಅರೆ ಮಾಡಿಕೊಂಡು ಬದುಕಿಸಿಕೊಂಡ ಪ್ರೇಮಸಾಹಸ ಅಸಾಧಾರಣ; ಅಪೂರ್ವ. ಪ್ರೇಮಪ್ರಪಂಚದಲ್ಲಿ ಗಂಡಸಿನ ತ್ಯಾಗಕ್ಕೆ ಮೊದಲ ಮಾದರಿಯಾಯಿತು. ಸಾವಿತ್ರಿಯನ್ನು ಹೊಗಳಿ ಅದಕ್ಕೆ ಪೂಜ್ಯತೆಯನ್ನು ತೋರಿಸಿದ ಜನ ರುರುವಿನ ಮನೋನಿಶ್ಚಯವನ್ನು ಮೆಚ್ಚದಿರುವುದು ಆಶ್ಚರ್ಯ !

ಸುಕನ್ಯೆ ರಾಜಕುಮಾರಿ ಚೆಲುವೆ. ಋಷಿಯ ಕೋಪಕ್ಕೆ ಪಾತ್ರಳಾಗುತ್ತಾಳೆ. ತಂದೆಯ ಕಷ್ಟವನ್ನು ತಪ್ಪಿಸಲೂ ಋಷಿಯ ನಿಬಂಧನೆಗೂ ಚ್ಯವನನನ್ನು ಮದುವೆಯಾಗಲು ಅವಳು ಒಪ್ಪಬೇಕಾಯಿತು. ಪ್ರತಿಯಾಗಿ ಒಂದು ಮಾತನ್ನೂ ಆಡಲಿಲ್ಲ. ಅವಳ ಒಪ್ಪಿಕೆ ಕೇಳಿದವರಾರು? ಯಾವಾಗ ಋಷಿಯ ಒಡವೆ ಆದಳೋ ಸತಿಯ ಹಾಗೆ ನಡೆದಳು. ಗಂಡನ ಮನಸ್ಸನ್ನು ಒಲಿಸಿಕೊಂಡಳು. ಅಶ್ವಿನಿಯರಂಥ ಚೆಲುವರು ಬಂದು ಕದಲಿಸಲು ನೋಡಿದರೂ ಸಗ್ಗಲಿಲ್ಲ. ನಾನು ಚಪಲಳಲ್ಲವೆಂದು ಹೇಳಿದಳು. ಅವರ ಚಿಕಿತ್ಸೆಯಿಂದ ಗಂಡ ರೂಪ ಯೌವನ ಸಂಪನ್ನನಾಗಿ, ಪುನಃ ರಣಕ್ಕೆ ಬಂದಾಗ ಕೂಡ ತನ್ನ ಗಂಡನನ್ನೇ ಆರಿಸಿಕೊಂಡಳು. ಇನ್ನೊಬ್ಬನನ್ನು ಆರಿಸಿಕೊಳ್ಳುವ ಸ್ವಾತಂತ್ರ್ಯವನ್ನು ಗಂಡನೇ ಕೊಟ್ಟಿದ್ದನು. ಅದನ್ನು ದುರುಪ ಯೋಗಪಡಿಸಿಕೊಳ್ಳಲಿಲ್ಲ. ಈ ಗುಣ ಅಸಾಮಾನ್ಯವಾದುದು. ಮುದುಕನಾದ ಗಂಡನಲ್ಲಿಯೇ ನಿಷ್ಠಳಾಗಿದ್ದವಳು ಅವನು ಯುವಕನಾದಾಗ ಅವನಿಂದ ಬೇರೆಯಾದಾಳೆ ?

ಹೀಗಾಗಿ ಈ ಐದು ಚಿತ್ರಗಳಲ್ಲಿಯೂ ಕಾಣುವ ಪ್ರೇಮದಾಂಪತ್ಯ ನಮ್ಮ ಕಾಲಕ್ಕೂ ಒಂದು ವಿಶೇಷ ಬಗೆಯ ಆದರ್ಶವನ್ನೂ ಕಾಂತಿ

ಯನ್ನೂ ಅರ್ಥವನ್ನೂ ಹಾಯಿಸಬಲ್ಲುದು ಎಂದು ತೋರಿ ಇವನ್ನು ಮೂಲದಲ್ಲಿ ಇದ್ದಂತೆ ಸಂಗ್ರಹಿಸಿದೆ. ಈ ಕಥೆಗಳಲ್ಲಿ ಆವರಣ, ಮಾತು ಕಥೆ, ಹೆಸರು, ರೀತಿ ಇವಕ್ಕೆ ಅಪೋಹ ಬಾರದಂತೆ ತಿಳಿಸುವ ಒಂದು ಒರಟುಯತ್ನ ಇಲ್ಲಿ ನಡೆದಿದೆ. ಕಾಲದ ಆವರಣ ಹಿಂದಿನದು ಎನ್ನುವುದಕ್ಕೆ ಸಹಾಯ ವಾಗುವ ಶಬ್ದವನ್ನೂ ವಾಕ್ಯಸರಣಿಯನ್ನೂ ಉಳಿಸಿಕೊಂಡಿದೆ. ; – ಆ ಕಥೆಗಳು ಎಷ್ಟು ನೇರವಾಗಿವೆ ಎಂಬುದಕ್ಕೆ ನಿದರ್ಶನವಾಗಿರಲಿ ಎಂದು

---

# ಕಡೆಯ ನಾಲ್ಕು ಮಾತು

ಲೋಕದ ರೂಪ, ರೀತಿ, ನೀತಿಗಳು ವ್ಯತ್ಯಾಸ ಹೊಂದುತ್ತಿರುವ ಈ ಕಾಲದಲ್ಲಿ ಭರತಖಂಡದ ಬದುಕಿನ ಸ್ವರೂಪವೂ ಬದಲಾಗತೊಡಗಿದೆ. ಇಂದು ನಮ್ಮ ಜನರ ಗಮನಕ್ಕೆ ಇವೊತ್ತಿನವೆನ್ನುವ ಸಂಗತಿಗಳನ್ನೇ ತಂದರೆ ಮೇಲು; ನಮ್ಮ ಬದುಕು ಹೊಸ ಆವರಣದಲ್ಲಿ ಬದುಕಬೇಕಾದ್ದು; ನಾಳೆಗೆ ಬೆಳೆದು ನಡೆಯಬೇಕಾದ್ದು; ಹಿಂದಿನ ಕಾಲದ ಯಾವುವೋ ಕಥೆಗಳನ್ನು ಪುನಃ ಪುನಃ ಎತ್ತಿ ಜನರ ಮುಂದಿಟ್ಟು ಹಿನ್ನೋಟಕ್ಕೆ ಕಟ್ಟುವುದು ಪುರೋಗಾಮಿ ಯಲ್ಲ, ಪ್ರತಿಗಾಮಿ ಎನ್ನುವವರುಂಟು. ಈ ಆಕ್ಷೇಪಣೆ ಪೂರ್ತಿ ಸರಿಯಲ್ಲ. ಈ ವಿಮರ್ಶೆಯ ಮೊದಲರ್ಧ ಮಾತು ಸತ್ಯ. ಎಲ್ಲ ಬಾಳೂ ಇಂದು ಚೆನ್ನಾಗಿ ಬಾಳಿ ಮುನ್ನೋಟವುಳ್ಳದ್ದಾಗಬೇಕು. ಆದರೆ ಒಂದು ನಾಡಿನ ಜೀವನ ನದಿಯ ಪ್ರವಾಹದಂತೆ ನಡೆದು ಬಂದಿರುತ್ತದೆ. ಅದರ ಹುಟ್ಟು ಎಲ್ಲಿ? ಪೂರ್ವಪ್ರವಾಹ ಎಂಥದು? ಪಾತ್ರಲಕ್ಷಣ ಯಾವುದು ಎಂಬುದರ ಅರಿವು ಅದರ ಪರಿಚಯುವನ್ನು ಮಾಡಿಕೊಳ್ಳಬೇಕೆನ್ನುವವರಿಗೆಲ್ಲ ಬೇಕಾದ್ದು. ಹಿಂದಿನದನ್ನು ಅರಿತ ಹೊರತು ಇಂದಿನದನ್ನು ಅರಿಯಲಾಗದು; ಅರ್ಥ ವಾಗದು. ನಮ್ಮ ಜನರ ಬಾಳಲ್ಲಿ ಹಲವು ಲೋಪ ದೋಷಗಳಿವೆ; ಹಲವು ಶಕ್ತಿ ಪ್ರಭಾವಗಳಿವೆ. ಅವೆಲ್ಲ ನಮ್ಮ ಪೂರ್ವಚರಿತ್ರೆಯಲ್ಲಿ ನಟ್ಟು ಇರುವಂಥವು. ಈ ಜನದ ಸ್ವರೂಪ ಈಗಿನಂತಾದದ್ದು ಹಿಂದಿನ ಪ್ರಭಾವ ಗಳ ಪರಿಣಾಮವಾಗಿ. ಹೊರಬಾಳೇನೊ ಅನೇಕವಾಗಿ ಕಾಲಕಾಲಕ್ಕೂ ಮಾರ್ಪಟ್ಟಿದೆ. ನಾಡಿನ ಸ್ವಾತಂತ್ರ್ಯ ಇತರರಿಗೆ ಮಾರು ಹೋಗಿ ಅದರ ರೂಪರೇಖೆಗಳೇ ಅಳಿಸಿ ಹೋಗುವಷ್ಟು, ಗುರುತು ಸಿಕ್ಕದಷ್ಟು ಈ ಮಾರ್ಪು ಉಂಟಾಗಿದೆ. ಉಡಿಗೆ ತೊಡಿಗೆ, ಊಟ ಉಪಚಾರ, ಮಾತು ಕಥೆ, ಆಚಾರ ವ್ಯವಹಾರ, ಎಲ್ಲದರ ಮೇಲೂ ಇದರ ಫಲ ಕಾಣಿಸುತ್ತಿದೆ. ಆದರೆ ಜನರ ಅಂತರಂಗ ಜೀವನ ಬಹುಮಟ್ಟಿಗೆ ಒಂದೇ ಶ್ರದ್ಧೆ, ಭಕ್ತಿ

ವಿಶ್ವಾಸಗಳುಳ್ಳದ್ದಾಗಿ ಮೊದಲಿಂದ ಯಾವುದೋ ಒಂದು ರಸಕ್ಕೆ ಪಕ್ಷಪಾತ ತೋರಿಸಿತ್ತು. ಇದು ಈವರೆಗೂ ನಡೆದುಕೊಂಡು ಬಂದಿರುವುದು ನಮ್ಮ ಸಂಸ್ಕೃತಿಯ ವಿಶೇಷಲಕ್ಷಣ ; – ನಮ್ಮ ನಾಡಿನ ಸೌಭಾಗ್ಯಗಳಲ್ಲಿ ಒಂದು. ಬಾಳಿಗೆ ಹದವನ್ನೂ ಕಾಂತಿಯನ್ನೂ ಸ್ಥೈರ್ಯವನ್ನೂ ತಂದಿರುವ ಅಂಶ. ಹೊರ ವೈಯೂ ವೇಷವೂ ಹೇಗೇ ಕಾಣಿಸಿದರೂ ಒಳಗಿನ ಸತ್ವಕ್ಕೆ ಹಿಂದಿನಿಂದ ನಡೆದುಕೊಂಡು ಬಂದ ಗುಣವೇ ಇನ್ನೂ ಮೂಲಧಾತು. ಇದಕ್ಕೆ ಕಾರಣ ಭರತಖಂಡದಲ್ಲಿ ಜನ ಒಪ್ಪಿ ಬಳಸಿದಂಥ ಒಂದು ಧರ್ಮ ಸಂಪ್ರದಾಯ. ಈ ಸಂಪ್ರದಾಯಕ್ಕೆ ವೇದವೂ ಧರ್ಮಶಾಸ್ತ್ರಗಳೂ ಮೂಲ. ಆದಕ್ಕಿಂತ ಹೆಚ್ಚಾಗಿ ರಾಮಾಯಣ, ಭಾರತ, ಭಾಗವತ ಮುಂತಾದ ಇತಿಹಾಸಗಳಿಂದಲೂ ಶೈವ ವೈಷ್ಣವ ಶಾಕ್ತ ಪುರಾಣಗಳಿಂದಲೂ ಪುಷ್ಟಿ ಉಂಟಾಗಿದೆ. ಹಾಗೇ ಇವುಗಳಿಂದ ಒಂದು ವಿಶೇಷ ಬಗೆಯ ನೆಲ ಗಟ್ಟೂ ಆಕೃತಿಯೂ ಧಾತುವೂ ಜೀವಶಕ್ತಿಯೂ ಬಂದಿವೆ. ಭಾರತ ರಾಮಾಯಣಗಳ ಪ್ರಭಾವ ಹಿಂದೂ ಜನದ ಮೇಲೆ ಬಿದ್ದು ಮಾಡಿರುವ ಉಪಕಾರ ಅಸಾಧಾರಣವಾದ್ದು. ಜನದ ರಕ್ತದಲ್ಲಿ ರಕ್ತವಾಗಿ, ಮೂಳೆಯಲ್ಲಿ ಮೂಳೆಯಾಗಿ, ರಸವಾಗಿ ಸೇರಿಹೋಗಿದೆ.

ಈ ಸಣ್ಣ ಪುಸ್ತಕದಲ್ಲಿನ ಐದು ಕಥೆಗಳೂ ಮೂಲ ಮಹಾಭಾರತ ದಿಂದ ಎತ್ತಿಕೊಂಡವು. ಆ ಕಥೆಯಲ್ಲಿ ನಡನಡುವೆ ಬರುವ ಉಪಕಥೆಗಳು. ನಮ್ಮ ಸಂಸ್ಕೃತಿ ಮೊದಲಿಂದಲೂ ಯಾವ ದಾರ್ಢ್ಯದಲ್ಲಿ ನಡೆದಿದೆ, ಯಾವ ಪಕ್ಷಪಾತಕ್ಕೆ ಬೆಲೆ · ಕೊಟ್ಟಿದೆ ಎಂಬುದನ್ನು ತೋರಿ ಸುವುವು. ಇಪ್ಪೊತ್ತಿಗೂ ಹೊಸತೆನ್ನಬಹುದಾದ ರೀತಿ, ರಚನೆ ಅಲ್ಲಿ ಪ್ರತಿಫಲಿಸುವುವು. ಕಥೆಗಳು ಹಿಂದಿನವಾದರೇನು ? ಅವುಗಳಲ್ಲಿ ಎಲ್ಲ ಕಾಲದ ಮಾನವ ಜೀವನದ ಸತ್ಯದರ್ಶನ ಉಂಟು. ಎದೆಯ ಆಳದಲ್ಲಿ ಕುಳಿತು ಮನುಷ್ಯನನ್ನು ಶುಚಿಗೂ ಧೃತಿಗೂ ಧರ್ಮಕ್ಕೂ ನಡಸುವ ಪ್ರಭಾವಗಳ ಪರಿಚಯ ಅಲ್ಲಿ ದೊರಕುತ್ತದೆ. ಆ ಕಾಲಕ್ಕೂ ಈ ಕಾಲಕ್ಕೂ ಹೊರ ವ್ಯತ್ಯಾಸ ಎಷ್ಟೇ ಇದ್ದರೂ ಈ ಜನವೇ ಹಿಂದೆ ಬದುಕಿದ ಬಾಳು ಅದು : ಅದರ ಹದ ಇಂದಿಗೂ ಸ್ಫೂರ್ತಿದಾಯಕವೇ. ಆದುದರಿಂದ

ಅದು ಹಳತಲ್ಲ. ಇಂದಿನದು ಮಾತ್ರ ಹೊಸತು, ಹಿಂದಿನ ಕಾಲದ್ದು ಹಳತು ಎಂಬ ಮಾತು ಅಸತ್ಯ. ಹಳತು ಹೊಸತು ಎಂಬ ಮಾತು ಹೆಚ್ಚಾಗಿ ಜೀವಗುಣಕ್ಕೆ ಸಂಬಂಧಿಸಿದ್ದು. ಬರಿಯ ಕಾಲಮಾನಕ್ಕಲ್ಲ. ಜೀವಂತ ಪ್ರಭಾವ ಎಲ್ಲೆಲ್ಲಿ ಹರಿಯುವುದೋ ಹೊಮ್ಮುವುದೋ ಅಲ್ಲೆಲ್ಲ ಸನಾತನವಾದ, ಅಮೃತವಾದ ಚೈತನ್ಯವಿರುತ್ತದೆ. ಅಂಥ ಶಕ್ತಿ ಈ ಕಥೆಗಳಲ್ಲಿದೆ. ಸ್ವಲ್ಪ ವಯಸ್ಸಾದ ನಮ್ಮ ಜನಕ್ಕೆ ಈ ಪುರಾಣ ಕಥೆಗಳು ಸುಮಾರು ಪರಿಚಿತವೆಂದರೂ ಈ ಕಾಲದ ಸಣ್ಣ ವಯಸ್ಸಿನವರಿಗೆ ಪರಿಚಿತವಲ್ಲ. ಅವರ ತಿಳಿವಿಗೆ ಇಂಥವು ಬರಬೇಕೆಂಬ ಉದ್ದೇಶದಿಂದ ಇವನ್ನು ಇಲ್ಲಿ ಮಾಲೆ ಮಾಡಿದೆ. ಅಲ್ಲದೆ ಮಹಾಕೃತಿಗಳನ್ನು ಪ್ರತಿಯೊಂದು ಕಾಲದವರೂ ತಮ್ಮ ಕಾಲಕ್ಕೆ ಒಪ್ಪುವಂತೆ ಅರ್ಥ ಮಾಡಿಕೊಳ್ಳುವುದು ಶಕ್ಯ. ಆದ್ದರಿಂದ ನಮ್ಮ ಕಾಲಕ್ಕೆ ಅವು ಹೇಗೆ ಕಾಣುತ್ತವೆ ಎಂಬುದನ್ನು ಇವೊತ್ತಿನವರಿಗೆ ಹೇಳುವ ಕಾರ್ಯ ಅನಾವಶ್ಯಕವಲ್ಲ. ಇದು ಹಿಂದಿನ ಕಾಲಕ್ಕೆ ಕಾಣಿಕೆ; ಇಂದಿನ ಕಾಲದ ಪ್ರಯೋಜನ.

ಇನ್ನೊಂದು ಮಾತು :

ಭರತಖಂಡದ ಜೀವನ ಬೇರೆ ಅಚ್ಚಿಗೂ ಕಟ್ಟಿಗೂ ತಿರುಗುತ್ತಿರುವುದೆಂದೆವು. ಸಮಾಜದ ವ್ಯವಸ್ಥೆ, ಆರ್ಥಿಕ ರಾಜಕೀಯ ವ್ಯವಹಾರ, ಆಸ್ತಿ ಪದ್ಧತಿ, ದಾಂಪತ್ಯವಿವೇಕ ಮುಂತಾದ ವಿಚಾರಗಳಲ್ಲಿಯೂ ಹೊಸ ಬಗೆಯ ನಡವಳಿಕೆಯ ಪ್ರಕಾರಗಳು ಇಂದು ಬರಲಿವೆ. ಯಾರೆಷ್ಟು ತಡೆದರೂ ಖಂಡಿತ ಮಾರ್ಪಾಡು ಆಗುವುದು. ಶಾಸನ ರಚನೆ ಇವಕ್ಕೆ ನ್ಯಾಯವಾದ ಸ್ಥಾನ ಕೊಡಬೇಕಾಗುವುದು. ಕಾಲಕ್ಕೆ ತಕ್ಕಂತೆ ಧರ್ಮಶಾಸ್ತ್ರಗಳು ಕೂಡ ಇಂಥ ನೂರಾರು ಮಾರ್ಪಾಡುಗಳನ್ನು ಹಿಂದೆ ಮಾಡಿಕೊಂಡವು. ಈ ಕಾಲಕ್ಕೂ ಹೊಂದಿಕೊಂಡು ಗೃಹಜೀವನ, ದಾಂಪತ್ಯ ಮತ್ತು ವ್ಯವಹಾರ ವಿಚಕ್ಷಣೆ ಬೆಳೆಯದಿದ್ದರೆ ತೊಡಕು ಬಲಿಯುವುದು. ಸಮಾಜ ಜೀವನ ವಿರಸವಾಗಿ ಸುಖ, ಶಾಂತಿ, ನೆಮ್ಮದಿ ಜನಕ್ಕೆ ಇಲ್ಲದೆ ಹೋದಾವು.

ಭರತಖಂಡವೆಲ್ಲ ಈಗ ಅಖಂಡವಾದ ಒಂದು ಸ್ವತಂತ್ರ ವ್ಯವಹಾರ ಮಂಡಲ. ದೊಡ್ಡ ಪಟ್ಟಣಗಳು, ಕೈಗಾರಿಕೆಗಳು, ಕ್ರಿಯಾಮಂಡಲಗಳು,

ಸಮ್ಮೇಳನ ಸಮಾರಂಭ, ವಿದ್ಯಾ ಸಂಸ್ಥೆ, ಪ್ರಯಾಣ ಸಾಧನ, ಯಾನ ವಾಹನ ವರ್ತಮಾನ ಸೌಕರ್ಯ, ಕ್ರೀಡಾ ವಿನೋದ, ಅಂತರರಾಷ್ಟ್ರೀಯ ಸಂಪರ್ಕ, – ದಿನದಿನವೂ ಜನರನ್ನು ಹೆಚ್ಚು ಹತ್ತಿರ ಸೇರಿಸುತ್ತಿವೆ. ಯೋಚನೆಯಲ್ಲಿ, ಮಾತಿನಲ್ಲಿ, ಪ್ರಯೋಜನ ಸಾಧನೆಯಲ್ಲಿ, ಬೇರೆ ಬೇರೆ ಬಗೆಯ ಜನರನ್ನು ಹೆಚ್ಚು ಆಪ್ತವಾದ ಬಾಂಧವ್ಯಗಳಲ್ಲಿ ಬೆಸೆಯುತ್ತಿವೆ. ವರ್ಣ ಧರ್ಮದ ಬಿಗಿಕಟ್ಟೂ, ನಿರ್ಬಂಧ ಆತಂಕಗಳೂ ಹೋಗುತ್ತಿವೆ. ಮನಸ್ಸುಗಳು ಹೆಚ್ಚು ಧಾರಾಳವಾಗಿ ನಡೆಯಲು ಬಯಸುತ್ತಿವೆ. ಅಷ್ಟೇ ಏಕೆ? ನಡೆಯತೊಡಗಿವೆ. ಇವಕ್ಕೆ ತಕ್ಕಂತೆ ಜನರ ಯೋಚನೆಯೂ ಅನ್ಯ ದೇಶ ಅನ್ಯ ಕಾಲಗಳ ನಡವಳಿಕೆ ಮತ್ತು ಸಂಪ್ರದಾಯಗಳ ತಿಳಿವಳಿಕೆಯೂ ಸೇರಿ ಇದು ಸರಿ, ಇದು ಸರಿಯಲ್ಲ ಎಂಬ ವಿಚಾರಗಳಲ್ಲಿ ಹೆಚ್ಚಿನ ಸ್ವಾತಂತ್ರ್ಯವನ್ನು ವಹಿಸುತ್ತಿದ್ದೇವೆ. ಕೆಲವು ದೇಶಗಳಲ್ಲಂತೂ ಆಸ್ತಿಪದ್ಧತಿ, ಕುಟುಂಬ ರಚನೆ, ಒಪ್ಪಂದದ ಸ್ವಾತಂತ್ರ್ಯ, ವಿಚಾರ ಸ್ವಾತಂತ್ರ್ಯ – ಈ ಅಂಶಗಳಲ್ಲಿ ಕ್ರಾಂತಿಕರವಾದ ಬದಲಾವಣೆಗಳುಂಟಾಗಿವೆ. ಅವನ್ನು ಕುರಿತು ಜನ ಓದುತ್ತಾರೆ. ಮಾತನಾಡುತ್ತಾರೆ. ಗ್ರಂಥ ವ್ಯಾಸಂಗವೂ ವಿಚಾರ ವಿನಿಮಯವೂ ನಡೆಯುತ್ತದೆ. ಸಾಹಿತ್ಯದಲ್ಲಿಯೂ ಚಿತ್ರ ಮಂದಿರದಲ್ಲಿಯೂ ಬಗೆ ಬಗೆಯಾದ ಅನುಭವಗಳು ದೊರಕುತ್ತವೆ. ಈ ಎಲ್ಲದರ ಫಲವಾಗಿ – ಇತರ ಸಂಗತಿಗಳಲ್ಲಿನಂತೆಯೇ – ಮನುಷ್ಯನ ಮೂಲಭೂತವಾದ ಪ್ರೇಮಪ್ರವೃತ್ತಿಯೂ ಬಗೆ ಬಗೆಯಾಗಿ ಆಕಾರ ತಾಳುತ್ತಿದೆ; ವಿಶೇಷಗೊಳ್ಳುತ್ತಿದೆ. ಸಮಾಜವೂ ಧರ್ಮವೂ ಸಡಿಲವಾಗದಂತೆ ಕಟ್ಟುನಿಟ್ಟು ಹೊಸ ನಾಜೂಕಿನಲ್ಲಿ ಏರ್ಪಡಬೇಕು.

ಗಂಡು ಹೆಣ್ಣಿನ ಪ್ರೇಮ ಬಾಂಧವ್ಯದಲ್ಲಿಯೂ ದಾಂಪತ್ಯ ವಿಚಾರದಲ್ಲಿಯೂ ಹೆಚ್ಚು ಸ್ವಾತಂತ್ರ್ಯವಿದ್ದಾಗ ನಮ್ಮ ನಾಡಿನ ಹೆಂಗಸರೂ ಗಂಡಸರೂ ಹೇಗೆ ನಡೆದುಕೊಂಡು ದೊಡ್ಡದಾಗಿ ಬಾಳಿದರು ಎಂಬ ಇಂತಹ ಚಿತ್ರಗಳು ಮಾರ್ಗದರ್ಶಕವಾಗಬಲ್ಲವು. ಸ್ವಾತಂತ್ರ್ಯವೆಂದರೆ ಇಚ್ಛೆಬಂದಂತೆ ನಡೆಯುವುದಲ್ಲ. ಸ್ವಾತಂತ್ರ್ಯವನ್ನು ಬಯಸುವವರು ತಮ್ಮ ಮೇಲೆ ತಾವೇ ನಿಯಮಗಳನ್ನು ಹಾಕಿಕೊಂಡು ನಡೆದರೆ ಮೇಲು. ಸಂಯಮಕ್ಕೆ ಎಂದಿಗೂ ಬೆಲೆ

ಯುಂಟು. ಸ್ವಾತಂತ್ರ್ಯವಿರುವಾಗ ಅದರ ಅಗತ್ಯ ಇನ್ನೂ ಹೆಚ್ಚು. ಶಾಸ್ತ್ರಗಳೋ, ಸಮಾಜ ರೂಢಿಯೋ, ರಾಜಕೀಯವು ಹೊರಿಸುವ ವಿಧಿ ನಿಷೇಧಗಳೋ, ಪ್ರೇಮ ಪ್ರವೃತ್ತಿಗೆ ನಿರ್ಬಂಧವನ್ನೂ ಹೊಣೆಗಾರಿಕೆಗಳನ್ನೂ ಹಾಕುತ್ತವೆ, – ಸಮಾಜ ಹಿತಕ್ಕಾಗಿ. ಅವುಗಳ ಪೀಡೆ ಕಷ್ಟವಾಗಬಲ್ಲದು. ಒಬ್ಬಿಬ್ಬರಿಗೆ ಅನ್ಯಾಯವೂ ಆಗಬಹುದು. ಎಂದೇ ಆಗಲಿ ಜನ ತಾವೇ ಒಂದು ಧರ್ಮ ನಿಯಮವನ್ನು ಹಾಕಿಕೊಂಡು ತಮ್ಮ ಪ್ರೇಮವನ್ನು ಶುದ್ಧವಾಗಿಟ್ಟು ಕೊಳ್ಳಬೇಕು. ಹಾಗೆ ಮಾಡುವುದೇ ಅವರಿಗೆ ವ್ರತ. ಇಲ್ಲದಿದ್ದರೆ ಬದುಕಿನ ರಸ, ಧಾತು ಕೆಡುವುವು.

ಕೆಲವರು ಹೀಗೆ ನುಡಿವರು : ಹೆಂಗಸು ತನ್ನ ಪ್ರೀತಿಯ ವಸ್ತುವಿಗಾಗಿ ಮನೆ, ಊರು, ಜನ, ಸಂಪತ್ತು, ಪದವಿ, ಮತಧರ್ಮ ಎಲ್ಲವನ್ನೂ ತ್ಯಾಗ ಮಾಡಬಲ್ಲಳು ; ತಾನು ಪ್ರೀತಿಸಿದ ಪುರುಷನಿಗಾಗಿ ಲೋಕದ ನಿಂದೆಯನ್ನು ಮೀರಬಲ್ಲಳು ; ಸಮಾಜವು ನೀತಿ ಎಂದೆಣಿಸಿದ ಕಟ್ಟುಗಳನ್ನು ಮೀರಿ ಮಾನಾಪಮಾನಗಳನ್ನು ಲೆಕ್ಕಿಸದೆ ಪ್ರೇಮವೀರವನ್ನು ಸಾಧಿಸಬಲ್ಲಳು ; ಗಂಡಸಿನಲ್ಲಿ ಇಂಥ ವರ್ತನೆ ಕಂಡುದಿಲ್ಲ ; ಆತನಿಗೆ ಪ್ರೇಮ ಜೀವನ ಎಂದಿಗೂ ಎರಡನೆಯ ಎಣಿಕೆಯದು ; ಹೆಂಗಸಿನಷ್ಟು ಸ್ವಾರ್ಥತ್ಯಾಗ ಗಂಡಸಿಗೆ ಈ ವಿಷಯದಲ್ಲಿ ಶಕ್ಯವಿಲ್ಲವೆಂದು ಹೆಣ್ಣಿನ ಸಾಹಸವನ್ನು ಪ್ರಶಂಸೆ ಮಾಡುವರು ಇದು ಸಾಹಸವೇನೊ ಸರಿಯೆ. ಆದರೆ ಇಂತಹ ಸಾಹಸಕ್ಕೆ ಹೆಂಗಸು ಸಿದ್ಧ ವಾಗುವುದೂ ಗಂಡಸು ಇದನ್ನು ಬಯಸಿ ಮೆಚ್ಚಿ ಸ್ವೀಕರಿಸುವುದೂ ಎರಡೂ ಸರಿಯಲ್ಲ. ನೀತಿಯನ್ನು ಮೀರಿ ನಡೆಯುವುದು ವೀರವಾಗಬೇಕಿಲ್ಲ. ಶುಚಿ ಯನ್ನು ಕಾಪಾಡಿಕೊಂಡು ಹೇಗೆ ನಡೆದರೂ ಧರ್ಮ ಸಾಧನೆಯಾಗುತ್ತದೆ. ಶುಚಿ, ಧರ್ಮ ಎರಡನ್ನೂ ಬಿಟ್ಟ ಸಾಹಸ ಹೊರಗಣ್ಣಿಗೆ, ಹೊರ ಎಣಿಕೆಗೆ ಮಿರುಮಿರುಗಿ ಕಂಡರೂ ಶುಚಿಯನ್ನೂ ಧರ್ಮವನ್ನೂ ಮೀರುವ ಸರ್ವದಾನ ಬೆಲೆಯಿಲ್ಲದ್ದು. ಮಾನ ಬಿಟ್ಟ ಪ್ರೇಮಕ್ಕೆ ದುಗ್ಗಾಣಿಯ ಬೆಲೆಯಿಲ್ಲ. ಅಂಥ ಅಗ್ಗವಾದ್ದನ್ನು ಕೊಡುವುದು ಏನು ಹಿರಿದಾನ? ಈ ಬಗೆಯ ದಾನವನ್ನು ಸ್ವೀಕರಿಸುವ ಗಂಡಸಿನ ದೃಷ್ಟಿಯಿಂದ ಕೂಡ ಇದಕ್ಕೆ ಬೆಲೆಯಿಲ್ಲ. ಸಾವಿತ್ರಿ ಹೇಳಿದಂತೆ ಒಂದು ಸಲ ಒಬ್ಬರಿಗೆ ತೆತ್ತ ಜೀವ

ಇನ್ನೊಂದನ್ನು ಕಣ್ಣೆತ್ತಿ ನೋಡಲಾರದು. ತಾನು ಅದಕ್ಕೆ ಮುಡಿಪು. ಅದಕ್ಕಾಗಿ ಮಾತ್ರ ಬದುಕುವುದು, ಅದಕ್ಕಾಗಿ ಸಾಯುವುದು. ಸ್ವಂತ ಇಚ್ಛೆಯಿಂದ. ಇನ್ನು ಕೆಲವರು ಮನಸ್ಸುಗಳನ್ನು ಸಡಿಲ ಬಿಟ್ಟು ಕೊಳಿ ಜೀವನವನ್ನು ವರ್ಣಿಸಿ ತೋರಿಸಿ, ಅಲ್ಲಿ ಒಂದೊಂದು ಸಲ ಕಾಣುವ ಪ್ರೀತಿಯ ಔದಾರ್ಯವನ್ನು ವರ್ಣಿಸುವರು. ಸಮಾಜದಲ್ಲಿ ಮಾನ್ಯರೆನ್ನಿಸಿಕೊಳ್ಳು ವವರಿಗಿಂತ ಇವರೇ ಮೇಲೆಂಬಂತೆ ವರ್ಣಿಸುವರು. ರೋಮಾಂಚಕಾರಿಯಾದ ಕಟ್ಟುಕಥೆಗಳಲ್ಲಿ ಮನಸ್ಸು ಚಲಿಸಿ ಪ್ರತಿಯೊಂದು ಚಲನೆಗೂ ಭಾವಪೂರ್ಣ ವಾದ ಸಮಾಧಾನ ಸಿಕ್ಕುವುದುಂಟು. ಇವೊತ್ತು ಇನ್ನೊಂದು ಬಗೆಯ ದೇಹವಾದ, ಭೋಗವಾದ ಹುಟ್ಟಿದೆ. ದೇಹಕ್ಕೆ ಇರುವ ಅಗತ್ಯ ಒಬ್ಬೊಬ್ಬ ರಲ್ಲಿ ಒಂದೊಂದು ರೀತಿ ; ಚಪಲವು ದೇಹದ ಸ್ವಭಾವ ; ಅದು ಒಂದಕ್ಕಿಂತ ಹೆಚ್ಚಿನ ತೃಪ್ತಿ ಮೂಲಗಳಿಂದ ಸುಖವನ್ನು ಬಯಸುವುದು ತಪ್ಪೇನೂ ಅಲ್ಲ ಎನ್ನುವರು. ಬಹುಸಂಗತತ್ವದ ಸಮರ್ಥನೆ ಇದು. ದೇಹಕ್ಕೆ ಈ ಪ್ರಾಧಾನ್ಯ ಕೊಟ್ಟು ಈ ಮುಂಚೆ ಸಮಾಜ ನಷ್ಟಗಳನ್ನು ಅತಿಯಾಗಿ ಅನುಭವಿ ಸಿದೆ. ಕಟ್ಟುನಿಟ್ಟಿಲ್ಲದೆ ದೇಹದ ಹಸಿವೂ ದಾಹಗಳೂ ಒಂದು ಮಿತಿಯಲ್ಲಿ ನಡೆಯುವಾದರೆ ಸಮಾಜ ಜೀವನ ಕೆಡುವುದೆಂಬ ಕಾರಣದಿಂದಲೇ ನಿಯಮ್ನ ನಿರ್ಬಂಧಗಳೂ ಸಂಸ್ಕಾರಗಳೂ ಏರ್ಪಟ್ಟಿದ್ದು.

ಹಾಗೆಯೇ ಮನಸ್ಸು ನಿರ್ಮಲವಾಗಿದ್ದರೆ ಸರಿ ; ದೇಹದ ಅಚಾತುರ್ಯ ಪ್ರಮಾದಗಳನ್ನು ಗಣಿಸಬೇಕಾದ್ದಿಲ್ಲ ಎಂಬುದು ಕೂಡ ಈ ಕಾಮ ಭೋಗದ ವಾದ. ಯಾರ ಮನಸ್ಸು ನಿರ್ಮಲವೋ ಯಾರದಲ್ಲವೋ ಲೋಕಕ್ಕೆ ಹೇಗೆ ಗೊತ್ತಾಗಬೇಕು ? ಅವರವರ ಮನಸ್ಸಿಗೆ ಕೂಡ ಅದರ ಆಳ ತಿಳಿಯು ವುದು ಕಷ್ಟ. ತನ್ನ ವಿಷಯದಲ್ಲಿ ತಾನು ವಿಮರ್ಶೆ ಮಾಡಿಕೊಳ್ಳುವ ಶಕ್ತಿ ಹತ್ತರಲ್ಲಿ ಒಂಬತ್ತು ಜನಕ್ಕೆ ಇರುವುದಿಲ್ಲ. ಇಂಥವೆಲ್ಲ ಜನರ ಯುಕ್ತಿಯಾಗುತ್ತದೆಯೇ ಹೊರತು ಇದರಿಂದ ಧರ್ಮಸಾಧನೆಗೆ ಸ್ವಲ್ಪವೂ ನೆರವಾಗದು. ಎಂಜಲ ರುಚಿ ಹತ್ತಿದವರಿಗೆ ಪರಿಶುದ್ಧಿ ಸಪ್ಪೆಯಾಗಿ ಕಾಣುವುದು ಸಹಜ. ಅಂಥವು ಮೋಹಕವಾಗುವಂತೆ ಕೆಲವರು ಎತ್ತಿ ತೋರಿಸುತ್ತಾರೆ. ಇಂಥಲ್ಲಿ ಇರಬಹುದಾದ ಗುಣ ಆ ಸನ್ನಿವೇಶ

ದಲ್ಲಿ ಆ ಮಟ್ಟಿಗೆ ಮೆಚ್ಚಬಹುದಾದೀತು. ಈಗ ನಾವು ಯೋಚಿಸುತ್ತಿರುವುದು ಶುಚಿಶೀಲವನ್ನು; ಸಚ್ಚಾರಿತ್ರವನ್ನು. ವ್ಯಭಿಚರಿಸದ ಮನಸ್ಸಿನ ನಿಶ್ಚಲ ನಿಶ್ಚಯಗಳನ್ನು. ರಾಘವಾಂಕನು ಒಂದು ಪ್ರಸಂಗದಲ್ಲಿ ಹೇಳಿರುವಂತೆ "ಅಕ್ಕಕ್ಕು ಬಚ್ಚಲುದಕಂ ತಿಳಿದೊಡೆ ಆರ ವಿವಾಹಕ್ಕೆ ಯೋಗ್ಯಂ ?" ಎನ್ನ ಬೇಕಾದೀತು. ಇವರು ವರ್ಣಿಸುವ ಹಲವು ಪ್ರಸಂಗಗಳನ್ನು ಎಲ್ಲಿಯೇ ಆಗಲಿ, ಯಾರೇ ಆಗಲಿ ಸುಲಭವಾಗಿ ಮನಸ್ಸನ್ನು ಸಡಿಲಗೊಳಿಸಿ ಚಪಲಕ್ಕೂ ದೌರ್ಜನ್ಯಕ್ಕೂ ಕರಗುವಂತೆ ಮಾಡುವ ನಡತೆಗಳನ್ನು ಬಣ್ಣಕೊಟ್ಟು ವರ್ಣಿಸ ಬಾರದು. ಸೋಲುವ ಪ್ರವೃತ್ತಿಗೆ ಒಂದು ಸಲ ಅವಕಾಶ ಬಂದರೆ ಪುನಃ ಬಿಗಿ ಬರುವುದು ಕಷ್ಟ. ಮೈ ಮನಸ್ಸುಗಳಿಗೆ ಸಡಿಲವಾಗುವ, ಜಾರುವ ಅಭ್ಯಾಸ ಬಂದು ಬಿಡುತ್ತದೆ. ಇದರಿಂದ ವ್ಯಕ್ತಿಗಳ ಜೀವನವೂ ಸಮಾಜದ ಜೀವನವೂ ದುರ್ಬಲವಾದಾವೇ ಹೊರತು ಶಕ್ತಿಗೆ ಬೆಳೆಯಲಾರವು. ಹೀಗೆಂದ ಮಾತ್ರದಿಂದ ಅಂಥಲ್ಲಿ ಏಕದೇಶವಾಗಿ ಕಾಣುವ ಸೌಂದರ್ಯಕ್ಕೆ ವಿಶೇಷ ಸನ್ನಿ ವೇಶಗಳಲ್ಲಿ ಬೆಲೆ ಕಾಣಿಸದೆಂದಲ್ಲ. ಆದರೆ ಸಣ್ಣ ಪ್ರಿಯಾಂಶಕ್ಕಾಗಿ ಬಹು ಕಾಲದ ಹಿತಗಳನ್ನು ಕೆಡಿಸುವ ಪ್ರವೃತ್ತಿಗಳು ರಕ್ತಕ್ಕಿಳಿಯದಂತೆ ನೋಡಿ ಕೊಳ್ಳಬೇಕು.

ದೇಶದ ವ್ಯವಹಾರ ಧರ್ಮ ಹಿಂದೆ ಎಂದೂ ಇಲ್ಲದಿದ್ದಷ್ಟು ವಿಶಾಲವಾಗಿ ವ್ಯಾಪಿಸಲಿದೆ. ಹೆಚ್ಚು ಸಾಕಲ್ಯದಿಂದ ನಾಳೆಯ ರಾಜ್ಯ ಶಾಸನಗಳು ರಚಿತ ವಾಗಲಿವೆ. ಭರತ ವರ್ಷದಲ್ಲಿ ಎಲ್ಲ ಜಾತಿಯ ಜನರೂ ಮಾತು ಮತಗಳವರೂ ಗಂಡು ಹೆಣ್ಣೆನ್ನದೆ ಸಮಾನ ಹಕ್ಕುಗಳನ್ನು ಜೀವನದ ಎಲ್ಲ ರಂಗಗಳಲ್ಲಿಯೂ ಪಡೆಯುತ್ತಾರೆ. ಗಂಡಸಿಗೆ ಇರುವ ಹಕ್ಕುಗಳೆಲ್ಲ ಹೆಂಗಸಿಗೂ ಬರುವ ವಾಗಿವೆ. ತಮ್ಮಿಚ್ಛೆಗೆ ಬಂದವರನ್ನು ಮದುವೆ ಆಗಬಲ್ಲ, ಮನಸ್ಸು ಹೊಂದದೆ ರೋಸಿಹೋದಲ್ಲಿ ದಾಂಪತ್ಯದಿಂದ ಬಿಡುಗಡೆ ಪಡೆಯಬಲ್ಲ, ಮತ್ತು ಪುನರ್ವಿವಾಹ ಮಾಡಿಕೊಳ್ಳಬಲ್ಲ ಅವಕಾಶ – ಬಹುಶಃ ಯಾರೆಷ್ಟು ತಡೆ ದರೂ – ನಿರ್ಮಾಣವಾಗುವುದು. ಇದು ಅಗತ್ಯವೂ ಹೌದು. ಒಂದು ಕರುಣೆಯೂ ಆದೀತು. ಗಂಡು ಮಕ್ಕಳಿಗೆ ಹೇಗೋ ಹೆಣ್ಣು ಮಕ್ಕಳಿಗೂ ಹಾಗೆಯೇ ತಾಯಿತಂದೆಯರ ಆಸ್ತಿಯಲ್ಲಿ ಇನ್ನು ಮುಂದೆ ಸಮಭಾಗ

ದೊರೆಯುವುದು. ಅವರಂತೆ ಇವರಿಗೂ ವಿದ್ಯಾಶಾಲೆಗಳಲ್ಲಿ ಶಿಕ್ಷಣಾವಕಾಶ ದೊರೆಯುವುದು ಸಮಾಜವಾಗಲಿ ರಾಜಶಾಸನಗಳಾಗಲಿ ಗಂಡಸನ್ನು ತಡೆಯದವು ಹೆಂಗಸನ್ನೂ ನಿರ್ಬಂಧಿಸಲಾರವು. ಜೀವನೋಪಾಯಗಳನ್ನು ಸ್ವತಂತ್ರವಾಗಿ ಕಂಡುಕೊಂಡು ಅವನ್ನು ಹಿಡಿಯುವ, ತಮ್ಮ ಅನ್ನವನ್ನು ತಾವು ದುಡಿದು ಸಂಪಾದಿಸಿಕೊಳ್ಳುವ ಅನುಕೂಲ ಇಬ್ಬರಿಗೂ ಒಂದೇ ಸಮನಾಗುವುವು. ಪ್ರಯಾಣ, ವಿನೋದ, ವಿಹಾರ ಎಲ್ಲ ರಂಗಗಳಲ್ಲಿಯೂ ಕಾನೂನಿನ ಎಣಿಕೆಯಲ್ಲಿ ಸಮಾನತೆ ಏರ್ಪಡುವುದು. ಸ್ವತಂತ್ರವಾಗಿ ಯೋಚಿಸುವ, ನುಡಿಯುವ, ನಡೆಯುವ, ಧರ್ಮದ ಮೂಲಾಂಶಗಳನ್ನು ಆಳವಾಗಿ ವಿವೇಚಿಸುವ ಅಧಿಕಾರವೂ ಹಾಗೆಯೇ ಸಮ.

ಆದುದರಿಂದ ಈವರೆಗೂ ಬಲಿದಿದ್ದ ಗಂಡಸಿನ ಮೇಲ್ಮೆಗೂ ಅಧಿಕಾರಕ್ಕೂ ಹೆಂಗಸಿನ ಸ್ವಾತಂತ್ರ್ಯ ಧಕ್ಕೆ ತರುವಂಥದಾಗಬಲ್ಲದು. ಹೆಂಗಸಿಗೆ ಇಷ್ಟೇ ಸರಿ, ಇಷ್ಟು ಸಾಕು, ಬೇರೆ ಇನ್ನಾವುದೂ ಬೇಡ ಎಂದು ಗಂಡಸು ನಿರ್ಣಯಿಸುವುದಂತೂ ಅಶಕ್ಯವಾಗುತ್ತದೆ. ವಯಸ್ಕರಾದ ಅವರಿಗೂ ವೋಟಿನ ಅಧಿಕಾರ ಬರುವುದರಿಂದ ಅವರು ಈಗಿರುವ ಸುಮಾರು ಒಟ್ಟು ನಾಲ್ಕು ಸಾವಿರದಲ್ಲಿ ಎರಡು ಸಾವಿರ ಸ್ಥಾನಗಳನ್ನು ಶಾಸನಸಭೆಗಳಲ್ಲಿ ಪಡೆಯುವ ಅವಕಾಶ ವುಂಟಾಗಿದೆ. ಹೆಂಗಸಿನ ವೋಟು ಹೆಂಗಸಿಗಲ್ಲದೆ ಗಂಡಸಿಗೆ ಕೊಡತಕ್ಕದ್ದಲ್ಲವೆಂಬ ಒಂದು ಸಣ್ಣ ನಿರ್ಣಯವನ್ನು ಹೆಂಗಸರು ಮಾಡಿಕೊಂಡರೆ ಶಾಸನ ಸಭೆಗಳ ದೃಷ್ಟಿಯೂ ರೀತಿಯೂ ಈ ಅಂಶದಲ್ಲಿ ಖಂಡಿತ ಬೇರೆಯಾಗುವುದು. ಹೆಂಡತಿಯ ವೋಟು ಗಂಡನಿಗೆ ಏಕೆ ? ಎಂದು ಕೇಳಿದರೆ ಉತ್ತರ ಕೊಡುವುದೇನೆಂದು ? ಒಲಿಯದ ನಾರಿಯ ಪಂಥ ಗಂಡಸನ್ನು ಎದುರಿಸಿ ನಿಲ್ಲುವುದು. ಅದು ವಿರಸವಾದರೆ ? ಹುಟ್ಟಿದ ಮನೆ, ಸೇರಿದ ಮನೆ ದೂಡುತ್ತವೆ ; ಸಮಾಜ ಹಳಿದು ದೂರ ಮಾಡುವುದು, ಕಾನೂನು ಹೆಣ್ಣನ್ನು ಮಾತ್ರ ನಿರ್ಬಂಧಿಸಿ ಒತ್ತಾಯ ಪಡಿಸುವುದು, ಸ್ವರ್ಗದ ಆಸೆ ನರಕದ ಭೀತಿಗಳಿಂದ ಹೆಣ್ಣು ಗಂಡಿನ ಅಂಕೆಯಲ್ಲಿ ಇರಬೇಕು ಎಂಬವಾದವನ್ನು ನಾಳಿನ ಕಾಲ ತಳ್ಳಿ ಹಾಕುವುದು. ತನ್ನಷ್ಟೇ ಸರ್ವಪ್ರಕಾರದಲ್ಲಿಯೂ ಶಕ್ತಿ ಅಧಿಕಾರ ಸ್ವಾತಂತ್ರ್ಯಗಳುಳ್ಳ, ವಯಸ್ಸು ಸ್ಥಾನ ಮಾನಗಳುಳ್ಳ, ನಿರ್ಭೀತಿ ಸಾಹಸ ಕ್ರಿಯಾವ

ಕಾಶವುಳ್ಳ ಹೆಂಗಸನ್ನು ಸಮಾನಸತ್ತ್ವಳೆಂಬಂತೆ ಒಲಿಸಿ ಒಡನಾಡಬೇಕಾದ ಭಾಗ್ಯ ನಾಳೆಯ ಗಂಡಸರದು. ಸಹಧರ್ಮಚರಿಯಾದ ಹೆಂಗಸಿನ ಧರ್ಮವು ಗಂಡನ ತತ್ತ್ವ, ಅಭಿಪ್ರಾಯ ಮಾತ್ರ ಆಗಿ, ಇನ್ನು ಮುಂದೆ ಹೆಂಡತಿಗೆ ನಿರ್ಬಂಧ ವನ್ನು ಬಿಗಿಸಲಾರದು. ಇಬ್ಬರೂ ಒಡನೆ ಧರ್ಮದಲ್ಲಿ ನಡೆಯಬೇಕಾಗು ವುದು. ನಿಜವಾಗಿ ಅರ್ಧ ಬದುಕು ಆಕೆಯದು. ಇನ್ನರ್ಧ ಮಾತ್ರ ಇವನದು. ಆ ಒಡಂಬಡಿಕೆಯನ್ನು ದಿನಜೀವನದ ಪ್ರತಿ ಅಂಶದಲ್ಲಿಯೂ ನಟ್ಟು ನಡಸಿದ ಹೊರತು ಮನೆಯ ನೆಮ್ಮದಿ ಲಭಿಸಲಾರದು. ಆಕೆ ಆತ ಜೊತೆಗಾರರು ಧರ್ಮ ಕರ್ಮ ಯಾವುದರಲ್ಲಿಯೂ ಒಡೆತನ, ಸೇವಕ ಭಾವ ಸಲ್ಲದು. ಸಮಸತ್ವವುಳ್ಳವರ ಪ್ರೇಮರಾಜ್ಯದಲ್ಲಿ ಆಳುವ, ಆ ಪ್ರೇಮ ವನ್ನು ಉಳಿಸಿಕೊಳ್ಳುವ ಅಗತ್ಯವೂ ನಗಿಸಿ ನಲಿಯುವ ಸಾಹಸವೂ ನಾಳಿನ ವರಿಗೆ ಕಾದಿರುವ ಉತ್ಸವ. ಇದು ಎಷ್ಟು ಕಷ್ಟವೋ ಅಷ್ಟು ವೈಭವ ವುಳ್ಳದ್ದೂ ಹೌದು. ಇದನ್ನು ವ್ಯಂಗ್ಯ ಟೀಕೆ ಮಾಡಿ ಪರಿಹಾಸ್ಯ ದೃಶ್ಯ ಗಳನ್ನು ಕಟ್ಟಿ ಕೆಲವು ಕಾಲ ಗಂಡಸರು ವಿನೋದಪಡಬಹುದು. ಆದರೂ ಈ ಸತ್ಯಪ್ರಕಾಶನ ಕಣ್ಣನ್ನು ಕುಕ್ಕೀತು. ಅದು ದುರ್ದರ್ಶವೂ ದುರ್ಧರ್ಷವೂ ಕೂಡ ಆಗುತ್ತದೆ; – ಹೊಂದಿಕೆ ಆಗುವವರೆಗೂ. ಹಿಂದೆ ಸಣ್ಣ ವಯಸ್ಸಿನ ಹೆಣ್ಣು ಮಗುವನ್ನು ಮದುವೆ ಮಾಡಿಕೊಂಡು ಗಂಡನ – ಅಲ್ಲ, ಅತ್ತೆ ಮಾವಂದಿರ – ಮನೆಗೆ ಕರೆತಂದು ಹೊಸ ಮನೆಯ ಮರ್ಜಿಗೆ ಪಳಗುವಂತೆ ಹದ ಮಾಡಿಕೊಳ್ಳುವುದು ರೂಢಿಯಾಗಿತ್ತು; ಶಕ್ಯವಾಗಿತ್ತು. ಆಗಿನ ಕೂಡುಕುಟುಂಬ ಪದ್ಧತಿಯೂ, ಪತಿಯೇ ಪರದೈವವೆಂಬ ದೃಷ್ಟಿಯೂ, ಹಿರಿಯರಸೇವೆ ಸರ್ವಥಾ ಕರ್ತವ್ಯವೆಂಬುದೂ, ಸಾಮಾಜಿಕ ಅಸಹಾಯತೆಯೂ ಎಲ್ಲ ಸೇರಿ ಹೆಂಗಸಿನ ವಿಧೇಯತೆಯನ್ನು ಬಲಗೊಳಿಸುತ್ತಿತ್ತು. ಮುಂದೆ ಈ ಬಾಂಧವ್ಯದಲ್ಲಿ ವಿಧೇಯತೆಯೆಂಬ ಮಾತಿಗೇ ಸ್ಥಾನವೆಷ್ಟಿದ್ದೀತೋ ಹೇಳುವವರಾರು? ಸಮವಾಗಿ ಬಲಿತು ಧೈರ್ಯದಲ್ಲಿ ನಿಂತ ಗಂಡು ಹೆಣ್ಣು ವಿವಾಹವಾಗಬಯಸಿ ದಾಂಪತ್ಯವನ್ನು ಸಮಾನತೆಯ ಧರ್ಮದಲ್ಲಿ ನಡಸುತ್ತ ಒಬ್ಬರನ್ನೊಬ್ಬರು ದಿನದಿನವೂ ಒಲಿಸಿಕೊಂಡರೆ ಆಗ ದಾಂಪತ್ಯ ಸಫಲ. ಅಂಥಲ್ಲಿ ಪ್ರತಿ ಅಂಶದಲ್ಲಿಯೂ ಇಬ್ಬರ ನಡವಳಿಕೆಯೂ ಅನ್ಯೋನ್ಯತೆಯನ್ನು

ಕೊಟ್ಟು ಕೊಂಡು ಬಾಳಿಸಬೇಕಾಗುವುದು. ಇದೊಂದು ದಾಂಪತ್ಯಯೋಗವೇ ಸರಿ. ಯೋಗ ಕೆಟ್ಟರೆ ದಿನದಿನದ ಸಂಸಾರ ಜೀವನ ಕ್ಲೇಶಗೊಳ್ಳುತ್ತದೆ. ವಿರಸ ಬಲಿಯುತ್ತದೆ. ಇದರಿಂದ ಸಮಾಜದ ನಡತೆಯು ಪ್ರಕಾರಗಳೆಲ್ಲ ಸಂಪೂರ್ಣವಾಗಿ ವ್ಯತ್ಯಾಸ ಹೊಂದಲಿವೆ.

ಇದೆಲ್ಲ ಹೇಗೇ ಆಗಲಿ ನಿಜವಾಗಿ ಪ್ರೇಮವಿರುವ ಕಡೆ ಉಳಿದ ಕಷ್ಟ ನಿಷ್ಠುರಗಳನ್ನು ಆ ಪ್ರೇಮವೇ ದಾಟಿಸಬಲ್ಲದು. ಎರಡೂ ಕಡೆಯಿಂದ ನಿಷ್ಠೆ, ಕ್ಷಮೆ, ಮೈತ್ರಿ, ಹೊಂದಿಕೆಯ ಮನೋಧರ್ಮ ಮಾತ್ರ ಬೇಕು. ನಾಳಿನ ಸ್ವತಂತ್ರ ದಾಂಪತ್ಯಗಳ ಕೇತನಗಳಂತೆ, ಇಲ್ಲಿನ ಕಥೆಗಳ ಮಹನೀಯ ದಂಪತಿಗಳು ಕಾಣುವರು. ಆ ಬಗೆಯ ಪ್ರೇಮ, ಆ ಬಗೆಯ ದಾಂಪತ್ಯ ಜನರನ್ನು ಪರಸ್ಪರವಾಗಿ ಬದುಕಿಸುವುದು. ತಮಗಾಗಿ ಉಳಿಸಿಕೊಳ್ಳುವುದು. ಇಂದಿಗಿಂತ ಹೆಚ್ಚು ಧೀರವಾದ ಹೆಚ್ಚು ಸುಂದರವಾದ ಆದರ್ಶ ಅಲ್ಲಿ ಕಾಣಿಸುವುದು. ಇನ್ನೊಬ್ಬರಿಗೆ ನಷ್ಟವಾದರೂ ಚಿಂತೆಯಿಲ್ಲ. ತನಗೆ ಬೇಕು ಎಂಬ ಸ್ವಾರ್ಥ ಇಲ್ಲಿ ಸುತರಾಂ ಇಲ್ಲ. ತಾನೇನು ಕೊಟ್ಟೇನು? ತನ್ನ ಪ್ರತಿಷ್ಠೆಯನ್ನು ಎಷ್ಟು ತ್ಯಾಗ ಮಾಡೇನು? ತಗ್ಗಿಸಿಕೊಂಡೇನು? ಇನ್ನೊಂದಕ್ಕಾಗಿ ಎಂಬ ತ್ಯಾಗ ದೃಷ್ಟಿಯೇ ಇಲ್ಲಿ ಮಾನ್ಯ; ಗಮ್ಯ; ದೊಡ್ಡದು. ಎಂದಿಗೇ ಆಗಲಿ ಎಲ್ಲ ಧರ್ಮದ ಮೂಲಮಂತ್ರವೂ ಸಂಯಮ, ತ್ಯಾಗ, ದಾನ, ಶ್ರದ್ಧೆ, ನಿಷ್ಠೆ. ಈ ಚಿತ್ರಗಳಲ್ಲಿ ಧರ್ಮದ ಮೂಲಾಂಶವು ಕುಂದದ ಕಾಂತಿಯಿಂದ ಮೆರೆಯುವುದೆಂಬ ಕಾರಣದಿಂದ ಅವನ್ನು ತೋರಿಸಲು ಇಲ್ಲಿ ಯತ್ನಿಸಿದೆ.

---